# ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವ
## ವಜ್ರಮಹೋತ್ಸವ ಪ್ರತಿಷ್ಠಾನ.

* ಶ್ರೀ ಸಿದ್ಧಗಂಗಾ ಮಠ 600 ವರ್ಷಗಳ ಆಧ್ಯಾತ್ಮಿಕ ಪವಿತ್ರ ಪರಂಪರೆಯ ಇತಿಹಾಸ ಹೊಂದಿದೆ.
* ಇಲ್ಲಿಯ ತ್ರಿವಿಧ ದಾಸೋಹ ಮಹಾಕಾರ್ಯಗಳಾದ ಅನ್ನದಾನ, ವಿದ್ಯಾದಾನ ಧರ್ಮ-ಸಂಸ್ಕೃತಿ ಪ್ರಸಾರ ಜಗತ್ ಪ್ರಸಿದ್ಧವಾಗಿವೆ.
* ಶ್ರೀ ಮಠ ಜಾತ್ಯಾತೀತ ಸದ್ಭಾವನೆಯಿಂದ ದೀನ ದಲಿತರ ಉನ್ನತಿಗಾಗಿ ಶ್ರಮಿಸುತ್ತಿದೆ.
* ಎಲ್ಲಜಾತಿ, ವರ್ಗಕ್ಕೆ ಸೇರಿದ 5,000 ವಿದ್ಯಾರ್ಥಿಗಳು ಆಶ್ರಯ ಪಡೆದಿದ್ದಾರೆ.
* ಲಕ್ಷೋಪಲಕ್ಷ ನಾಡಿನ ವಿದ್ಯಾರ್ಥಿಗಳು ಶ್ರೀ ಮಠದಲ್ಲಿ ಶಿಕ್ಷಣ ಪಡೆದು ರಾಜ್ಯದ ಎಲ್ಲೆಡೆ ಯೋಗ್ಯ ನಾಗರಿಕರಾಗಿ ಜೀವನ ಸಾಗಿಸುತ್ತಿದ್ದಾರೆ.

ನಾಡಿನ ಭಕ್ತಕೋಟಿ ಮತ್ತು ಹಳೆಯ ವಿದ್ಯಾರ್ಥಿಗಳು ಪೂಜ್ಯ ಶ್ರೀ ಶ್ರೀ ಗಳವರ ನಿಸ್ವಾರ್ಥ ಸಮಾಜ ಸೇವೆ, ಅಪೂರ್ವ ಜೀವನ ದರ್ಶನ ಮತ್ತು ಸಾಧನೆಗಳನ್ನು ಕೃತಜ್ಞತೆಯಿಂದ ಸ್ಮರಿಸಿ ಸನ್ಯಾಸ ಸ್ವೀಕಾರದ ವಜ್ರಮಹೋತ್ಸವ ಆಚರಿಸಲು ಯೋಜನೆಯನ್ನು ರೂಪಿಸಿದ್ದಾರೆ. ಇದು ಶ್ರೀಮಠದ ಪ್ರಸ್ತುತ ಬೆಳವಣಿಗೆಯ ಅವಶ್ಯಕತೆಗೆ ಪೂರಕವಾಗಿದೆ.

–: ಯೋಜನೆಯ ಪ್ರತಿಷ್ಠಾನಗಳು :–

**5 ಕೋಟಿರೂಗಳ ವೆಚ್ಚದಲ್ಲಿ**

**ಸುಂದರ ಆಧುನಿಕ ಬೃಹತ್ ವಿದ್ಯಾರ್ಥಿ ನಿಲಯ**

**ಏಕಕಾಲದಲ್ಲಿ 3,500 ಮಂದಿ ಊಟ ಮಾಡುವ ಬೃಹತ್ - ಪ್ರಸಾದ ನಿಲಯ**

ಎಲ್ಲರ ಕಲ್ಯಾಣವನ್ನು ಬಯಸುತ್ತಿರುವ ಶ್ರೀ ಮಠದ ಈ ಐತಿಹಾಸಿಕ ಭವ್ಯ ದಿವ್ಯ ಸ್ಮಾರಕಗಳ ನಿರ್ಮಾಣಕ್ಕೆ ಉದಾರವಾಗಿ ನಾಡಿನ ಜನತೆ ಕೂಪನ್ ಕೊಳ್ಳುವುದರ ಮೂಲಕ, ಚೆಕ್/ಡ್ರಾಪ್ಟ್ ಮೂಲಕ "ಸಿದ್ಧಗಂಗಾ ಶ್ರೀ ಶ್ರೀ ಶಿವಕುಮಾರಸ್ವಾಮಿಗಳ ವಜ್ರಮಹೋತ್ಸವ ನಿಧಿ" ಹೆಸರಿನಲ್ಲಿ ನೆರವು ನೀಡಬೇಕಾಗಿ ಕೋರುತ್ತೇವೆ.

ಪದ್ಮಭೂಷಣ ಡಾ|| ಎಂ. ಸಿ. ಮೋದಿ, ಪಿ. ಎಲ್. ಮುಪ್ಪಪ್ಪ, ಐ.ಎ.ಎಸ್.
ಅಧ್ಯಕ್ಷರು ಕಾರ್ಯಾಧ್ಯಕ್ಷರು

**ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರ ವಜ್ರಮಹೋತ್ಸವ ಸಮಿತಿ,**

ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ-572104.

# ಸಿದ್ಧಗಂಗಾ

ಸಂಪುಟ-30. ಸಂಚಿಕೆ 8 ಆಗಸ್ಟ್—1994.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

" ಸ್ವಾನುಭಾವವನುಂಡ ಬೆಳಗು ಲಿಂಗ" ತೇಜ
"ಬೆಳಗಿಂಗೆ ಬೆಳಗಾಗಿ" ಬೆಳಗಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

§ § §

ಜೇವುಂಡ ಶ್ರೀಗುರುವೆ ನೋವುಂಡ ನನ್ನ ಸ್ವಾಮಿ
ಸಾವಗೆದ್ದಿರುವ ಜಂಗಮವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

§ § §

ನಿದ್ದೆಯೊಳು ಶಿವಚಿಂತೆ ಬುದ್ಧಿಯೊಳು ಶಿವಧ್ಯಾನ
ಸದ್ದಿಲ್ಲದೆ ಎದೆಯೊಳಗೆ ಶಿವಮಂತ್ರ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

— ಹೆಚ್. ವಿ. ವೀರಭದ್ರಯ್ಯ.

| ಲೇಖನ | ಲೇಖಕರು | ಪುಟ |
| --- | --- | --- |
| * ಶ್ರೀವಾಣಿ | — | 5 |
| * ಶ್ರೀ ಸಿದ್ಧಲಿಂಗೇಶ್ವರ ವಚನ | — | 7 |
| * ಸಂಪಾದಕೀಯ | — | 10 |
| * ಕಾರಣ ಪುರುಷ ಬಸವೇಶ್ವರ | —ಡಾ॥ ಎಲ್.ಆರ್. ಹೆಗಡೆ | 11 |
| * ಯುವ ಪೀಳಿಗೆಯಲ್ಲಿ ವೇದಾಂತವನ್ನು ಬಿತ್ತಿದ ಯುಗ ಪುರುಷ ಸ್ವಾಮಿ ಚಿನ್ಮಯಾನಂದಜೀ | —ಪೊಯಕ್ಕರ ಕೆ. ಗಣೇಶ್ | 18 |
| * ನೇಮಕ್ಕಿಂತ ಪ್ರೇಮ ಮುಖ್ಯ | —ಎಂ. ಮಾಧವ ಪೈ | 23 |
| * ಶ್ರೀ ಭಗವದ್ಗೀತಾರ್ಥಸಾರದ ಶ್ರೀ ಕೃಷ್ಣಯೋಗಿ | —ಸಾರಂಗ | 31 |
| * ರಹಸ್ಯಮಯ ಮಹಾದ್ವೀಪದ ದುರ್ಲಭ ದೃಶ್ಯಗಳು | —ಬಿ.ಸುಬ್ರಾಯಅಡಿಗ | 35 |
| * ಪ್ರೇಮ ವಿವಾಹಗಳು | —ವಿದ್ವಾನ್ ಎಸ್. ಷಡಕ್ಷರಿ | 41 |
| * ಜೈವಿಕ ವಿದ್ಯುತ್ತು ಮತ್ತು ಮಾನವ ಮಿದುಳು | —ಬಿ. ಎನ್.ಭಾಸ್ಕರ್ | 44 |



## ❋ ಶ್ರೀವಾಣಿ ❋

ಇಂದು ಜನಶಕ್ತಿಯು ಅಪವ್ಯಯವಾಗುತ್ತಿದೆ. ಜನಶಕ್ತಿ ಕ್ರಿಯಾಶೀಲವಾಗದ ಹೊರತು ರಾಷ್ಟ್ರಕ್ಕೆ ಭವಿಷ್ಯವಿಲ್ಲ. ಸ್ವಾತಂತ್ರ್ಯ ಬಂದ ನಂತರ ನಮ್ಮ ಜನರ ಮನೋಧರ್ಮವೇ ಬದಲಾಗಿದೆ. ದುಡಿಯುವುದೆಂದರೆ ಇನ್ನಿಲ್ಲದ ಅಲಕ್ಷ್ಯ. ಸುಖಾಪೇಕ್ಷೆ ಎಲ್ಲೆಲ್ಲೂ ಎದ್ದು ಕಾಣುತ್ತಿದೆ. ವೈಜ್ಞಾನಿಕ ಸಾಧನಗಳು ನಮ್ಮ ವಿಕಾಸಕ್ಕೆ ಬದಲಾಗಿ ವಿಪರೀತಕ್ಕೆ ಕಾರಣಗಳಾಗುತ್ತಿವೆ. ಯುವಜನತೆ ದಾರಿತಪ್ಪುವುದಕ್ಕೆ ಸಹಾಯಕಗಳಾಗುತ್ತಿವೆ. ಟಿ. ವಿ. ಯಿಂದು ಮನೆ ಮನೆಗಳಲ್ಲಿ ಆಕ್ರಮಣ ನಡೆಸಿದೆ. ಹೆಣ್ಣುಮಕ್ಕಳ ಕಾಲವನ್ನೇ ಕಸಿದುಕೊಳ್ಳುತ್ತಿದೆ. ವಾಷಿಂಗ್ ಮೆಷಿನ್, ಮಿಕ್ಸಿ, ಕಸಗುಡಿಸುವ ಸಾಧನಗಳಿಂದ ನಾವೆಷ್ಟು ಸೋಮಾರಿಗಳಾಗುತ್ತಿದ್ದೇವೆ ಎಂಬುದನ್ನು ಗಮನಿಸುತ್ತಿಲ್ಲ. ಬದಲಾಗಿ ದೇಹಾರೋಗ್ಯ ಹಾಗೂ ಮನಸ್ಸಿನ ಉಲ್ಲಾಸವನ್ನೇ ಕಳೆದುಕೊಳ್ಳುತ್ತಿದ್ದೇವೆ. ಒಂದು ಮೈಲಿಯನ್ನೂ ನಡೆಯಲಾರದ ಸ್ಥಿತಿಗೆ ಬಂದಿದ್ದೇವೆ. ಶ್ರಮ ಜೀವನದ ಅಭ್ಯಾಸವೇ ಕಣ್ಮರೆಯಾಗುತ್ತಿದೆ. ಯಂತ್ರ ಸಂಸ್ಕೃತಿಯ ದಾಸ್ಯಕ್ಕೊಳಗಾಗಿ ಮಾನವೀಯತೆಯನ್ನೇ ಮರೆಯುತ್ತಿದ್ದೇವೆ. ಪರಿಣಾಮದಲ್ಲಿ ಭಯಾನಕ ಸಮಾಜ ಸೃಷ್ಟಿಗೆ ಕಾರಣರಾಗುತ್ತಿದ್ದೇವೆ, ಬುದ್ಧಿಜೀವಿಗಳು, ಸಮಾಜ ಸುಧಾರಕರು, ಜನನಾಯಕರು, ಗಂಭೀರನಾಗಿ ಚಿಂತಿಸಬೇಕಾಗಿದೆ. ಜನಶಕ್ತಿಯು ಸದುಪಯೋಗ ಮಾಡಿಕೊಳ್ಳುವಲ್ಲಿ ಕ್ರಿಯಾಮುಖರಾಗಬೇಕಾಗಿದೆ.

23-11-93 ಪ್ರಾರ್ಥನಾ ಸಭೆಯಲ್ಲಿ ನೀಡಿದ ಆಶೀರ್ವಚನದಿಂದ ಸಂಗ್ರಹ)

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ ಮೇಲಾಗಿ ಶ್ರೀ ಮಠದ ಮುಖವಾಣಿ ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ 30ನೇ **ವರ್ಷಕ್ಕೆ ಪಾದಾರ್ಪಣೆ ಮಾಡಿದೆ. ತ್ರಿವಿಧ ದಾಸೋಹ ತತ್ಪರತೆಯಿಂದ ಮುನ್ನಡೆಯುತ್ತಿರುವ ಪತ್ರಿಕೆ** ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.


**" ಸಂಪಾದಕರು ",**
**'ಸಿದ್ಧಗಂಗಾ' ಮಾಸ ಪತ್ರಿಕೆ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-572104.



### ಚಂದಾ ದರ

ವಾರ್ಷಿಕ ಚಂದಾ 30-00ರೂ
ಆಜೀವ ಸದಸ್ಯತ್ವ 350-00

# ಶ್ರೀ ಸಿದ್ಧಲಿಂಗೇಶ್ವರ ವಚನ



ವಂದಿಸಿ ನಿಂದಿಸುವ ಸಂದೇಹಿಯ ಮನೆಯ ಕೂಳು
ಹಂದಿಯ ಬಾಯ ತುತ್ತ ನಾಯಿ ಕಿತ್ತುಕೊಂಡು ತಿಂದಂತಾಯಿತ್ತು ಕಾಣಾ!
ಅದೇನು ಕಾರಣವೆಂದಡೆ
ತನ್ನ ಒಡಲ ಉಪಾಧಿಗೆ ತನ್ನ ನಿಂದಿಸಿದುದನರಿಯದೆ
ಭಕ್ತನೆಂದು ಒಳಗಿಟ್ಟುಕೊಂಡು ನಡೆವವರನೊಲ್ಲೆ ಕಾಣಾ
ಮಹಾಲಿಂಗಗುರು ಸಿದ್ಧೇಶ್ವರ ಪ್ರಭುವೇ!

ಕೆಲವರಿಗೆ ಪರರ ನಿಂದೆಯಲ್ಲಿ ಬಹಳ ಆನಂದ ವುಂಟಾಗುವುದು ಮುಂದೆ ವಂದಿಸುವ ವಿನಮ್ರತೆಯನ್ನು ತೋರಿದರೂ ಹಿಂದೆ ನಿಂದಿಸುವ ಕಠೋರತೆಯನ್ನು ಪಡೆದವರು ಸಾಕಷ್ಟು ಜನರಿದ್ದಾರೆ. ವಿಚಾರಿಸಿ ನೋಡಿದರೆ ನಿಂದೆಯು ಮಹಾಪಾಪವು, ನಿಂದಕರಿಗೆ ಆತ್ಮನಿರೀಕ್ಷಣವೆಂಬುದೇ ಇರುವುದಿಲ್ಲ. ನಿಂದೆ ಮಾಡುವುದೇ ಸ್ವಭಾವವಾಗಿದ್ದರೆ ಪರರನ್ನು ನಿಂದಿಸುವುದಕ್ಕಿಂತ ತಮ್ಮನ್ನೇ ತಾವು ನಿಂದಿಸಿಕೊಳ್ಳುವಷ್ಟು ದೋಷಗಳು ತಮ್ಮಲ್ಲಿ ಸಾಕಷ್ಟಿರುವವು. ಇಂತಹ ಸ್ಥಿತಿಯಿಂದ ದೂರಾಗಿ ಯಾವಾಗಲೂ ಪರರ ದೋಷಗಳನ್ನೇ ಎಣಿಸಿ ನಿಂದಿಸುವವರ ಹೃದಯವು ಪಾಪಗಳಿಂದ ತುಂಬಿಕೊಂಡಿರುವುದು. ಹುಚ್ಚು ನಾಯಿಯು ತನ್ನ ಬಾಯೊಳಗಿನ ಹಲ್ಲುಗಳಲ್ಲಿದ್ದ ವಿಷವನ್ನು ಕಾರುವುದಕ್ಕಾಗಿ ಅನ್ಯರನ್ನು ಕಚ್ಚುತ್ತಲೇ ಇರುವುದು. ಅದರಂತೆ ಪಾಪಿಗಳು ತಮ್ಮೊಳಗಿನ ಪಾಪವನ್ನು ಅನ್ಯರ ದೂಷಣೆಯ ಮುಖಾಂತರ ಹೊರಗೆಡಹುತ್ತಾರೆ. ಅಂಥವರ ಮನೆಯ ಕೂಳು ಪಾಪಮಯವಾದುದು. ಅದನ್ನೆಂದೂ ಸಾತ್ವಿಕರು ಸೇವಿಸ ಕೂಡದು. ತನ್ನ ಒಡಲ ನಿಮಿತ್ತದಿಂದ ತನ್ನನ್ನೇ ನಿಂದಿಸುವುದನ್ನು ಮರೆತು, ಭಕ್ತನೆಂದು ಹೇಕೊಳ್ಳುತ್ತ, ಒಳಗೆ ನಿಂದೆಯ ಭಾವವನ್ನಿಟ್ಟುಕೊಂಡವರನ್ನು ದೇವರು ಎಂದಿಗೂ ಮೆಚ್ಚನು.

ಕೃಪೆ. ಷಟ್‌ಸ್ಥಲ ಜ್ಞಾನಸಾರಾಮೃತ-ಶ್ರೀ ತೋ. ಸಿ. ಕೈ. ಸೇ, ಸ. ಎಡೆಯೂರು-ಗದಗ)

# ಶ್ರೀ ಸಿದ್ಧಗಂಗಾ ಕ್ಷೇತ್ರ

ಯನ್ ಚನ್ನಬಸಪ್ಪ, ಗಮಕಿಗಳು, ನಂ. 543, 5 ನೇ ಕ್ರಾಸ್, 8 ನೇ ಮುಖ್ಯ, ಮಹಾಲಕ್ಷ್ಮಿ
ಪುರ–ಬೆಂಗಳೂರು–86

ಸಿದ್ಧಪುರುಷರ ಬೀಡು ಸಿದ್ಧಗಂಗಾ ಕ್ಷೇತ್ರ
ಸುತ್ತ ಬಳಸಿಹ ಬಂಡೆ ಅಲ್ಲಲ್ಲಿ ಗಿಡಮರವು
ಸಿದ್ಧಲಿಂಗನ ಬೀಡು ಶುದ್ಧತಾ ನೆಲೆವೀಡು
ಎತ್ತಿ ಪೆರೆಯುತಲಿಹುದು ಅಲ್ಲಿ ಧವಳ ಕೀರ್ತಿ

ವಿದ್ಯೆಗಾಗರವಲ್ಲಿ ಅನ್ನದಾನವದಲ್ಲಿ
ಶುದ್ಧ ಚಾರಿತ್ರವನು ಹರಡುತಿಹುದಲ್ಲಿ
ಲಿಂಗವಂತರ ಬೀಡು ಅಂಗದಾರಾಧನೆಯು
ಸಂಭ್ರಮದಿ ನಡೆವುದದು ದಿನ ನಿತ್ಯದಲ್ಲು

ಶ್ರೀ ಶಿವಕುಮಾರಸ್ವಾಮಿ ಚೇತನವು ತಾನಲ್ಲಿ
ಬೆಳಗಿ ಬೆಳಕಾಂತಿಹುದು ಅಹರ್ನಿಶವು ಅಲ್ಲಿ
ಜ್ಞಾನದಾಗರವಲ್ಲಿ ಭಕ್ತಿಸೌರಭವಲ್ಲಿ ಅನವರತ
ಎತ್ತಿ ಮೆರೆಯುತಿದೆ ಸದ್ಭಾವದಲ್ಲಿ ನೆಲೆಸಿ.

ಕ್ಷೇತ್ರದಾ ಬಗೆ ಚಂದ ನೋಟಕಾನಂದ ಮಯ
ಸಾಕಾರವಾಗಿಹುದು ಸಹಜತನ ನೋಟ
ಜಾತಿಮತ ಭೇದಗಳ ಸುಳಿವು ತಾನಲ್ಲಿಲ್ಲ
ಸಹಜ ಧರ್ಮದ ಬಗೆಯು ಸುಳಿವುದಲ್ಲಿ

ಅಂದಿಗಿಂದಿಗು ಚೆಂದದಾನೆಲೆವೀಡು
ಸುಂದರವು ತಾನಲ್ಲಿ ಜಾತ್ರೆ ವೈಭವವಲ್ಲಿ
ದನಗಳಾ ಪರುಷೆಯದು ಜನಗಳಾಜಂಗುಳಿ
ಚಂದದಲಿ ನಡೆಯುತಿದೆ ಪ್ರತಿವರ್ಷದಲ್ಲು

ಸಿದ್ಧಲಿಂಗನ ಕೃಪೆಯು ಸಿದ್ಧರಾಶೀರ್ವಾದ
ಎದ್ದು ಕಾಣುತಲಿಹುದು ಮನತುಂಬಿ ಬೆಳೆದು
ಶುದ್ಧ ಮನಸಲಿ ಪೋಗೆವೃದ್ಧಿಯಪ್ಪುದು ಜೀವ
ಆಧ್ಯಾತ್ಮ ಭಾವದಲಿ ಮನವು ತುಂಬುವುದು.

ಒಮ್ಮೆಯಾದರು ಮನದಿ ಹಮ್ಮು ಬರುತಿರೆ ಬುದ್ಧಿ
ಸಂಧಿಸಾತ್ಮನಲ್ಲಿ ಕೃಪೆಯು ತಾನಹುದು ದಿಟ
ಹೊಮ್ಮಿ ಬರುವುದು ಮನುಜ ನಲ್ಮೆಯದು ತಾನಲ್ಲಿ
ಮುಕ್ತಿ ಸಾಧನಕೆಡೆಯು ಅಲ್ಲಿ ಶ್ರೀ ಕ್ಷೇತ್ರದಲ್ಲಿ

# ಸಂಪಾದಕೀಯ

**ಬಸವಣ್ಣನವರ ಜೀವಿತಾವಧಿ**

ಮಾನವತೆಯ ಆರಾಧಕರಾದ, ಸದುವಿನಯದ, ಸದಾಕಾಲ ಪ್ರಸ್ತುತರಾದ ಬಸವಣ್ಣನವರನ್ನು ಕುರಿತು ಸಂಶೋಧನೆಗಳು ನಡೆಯುತ್ತಲೇ ಇವೆ. ನಿಜಕ್ಕೂ ಸ್ವಾಗತಾರ್ಹ. ಮಹಾತ್ಮರ ಜೀವನ ಲೋಕ ಜೀವನಕ್ಕೆ ದಾರಿದೀಪ. ಬಸವಣ್ಣನವರು ಬದುಕಿದ್ದು ಕೇವಲ ಮೂವ್ವತ್ತಾರು ವರ್ಷಗಳು, ಅಲ್ಲ ಐವತ್ತಾರು ವರ್ಷಗಳು ಅಲ್ಲ ಐವತ್ತಾರು ವರ್ಷಗಳು ಇತ್ಯಾದಿಯಾಗಿ ಭಿನ್ನ ಭಿನ್ನವಾದ ವಿವಾದಳಿಗನ್ನೂ ಜೀವಂತವಾಗಿವೆ. ಇದೀಗ ಇತಿಹಾಸ ಅಕಾಡೆಮಿಯ ಅಧ್ಯಕ್ಷರಾದ ಡಾ|| ಜಿ. ಎಸ್. ದೀಕ್ಷಿತರು ಕರ್ನೂಲ್ ಜಿಲ್ಲೆಯ ಸಂಗಮೇಶ್ವರದಲ್ಲಿ ದೊರೆತ ತೆಲುಗು ಶಾಸನದ ಪ್ರಕಾರ ತಮ್ಮ ಸಂಶೋಧನೆಯನ್ನು ಪ್ರಕಟಿಸಿದ್ದಾರೆ. "ಪ್ರಜಾವಾಣಿ" 13–7–94 ರ ಪುಟ ಮೂರರಲ್ಲಿ ಪ್ರಕಟವಾದ ಸುದ್ದಿಯ ಪೂರ್ಣ ಪಾಠವನ್ನು ಇಲ್ಲಿ ಗಮನಿಸಬಹುದು.

"ಬಸವಣ್ಣನವರ ಜೀವಮಾನ ಕಾಲವು ಕ್ರಿ. ಶ. 1105–1115 ರಿಂದ ಕ್ರಿ. ಶ. 1184 ರವರೆಗೆ ಎಂದು ಸಂಗಮೇಶ್ವರ (ಕರ್ನೂಲ್ ಜಿಲ್ಲೆ) ದಲ್ಲಿ ದೊರೆತ ಶಾಸನದ ಆಧಾರದ ಮೇಲೆ ಹೇಳಬಹುದು ಎಂದು ಇತಿಹಾಸ ಅಕಾಡೆಮಿ ಅಧ್ಯಕ್ಷ ಡಾ|| ಜಿ. ಎಸ್. ದೀಕ್ಷಿತ್ ಅವರು ಅಭಿಪ್ರಾಯ ಪಟ್ಟರು.

ಅವರು ಈಚೆಗೆ ಸಂಡೂರಿನಲ್ಲಿ ನಡೆದ ಅಖಿಲ ಭಾರತ ಇತಿಹಾಸ ಸಮ್ಮೇಳನದ ಅಂಗವಾಗಿ ನಡೆದ ವಿಚಾರ ಗೋಷ್ಠಿಯಲ್ಲಿ "ಬಸವಣ್ಣನವರ ಅವಧಿ" ಎಂಬ ವಿಚಾರವನ್ನು ಮಂಡಿಸಿದರು.

ಸಂಗಮೇಶ್ವರ (ಕರ್ನೂಲ್ ಜಿಲ್ಲೆ) ದಲ್ಲಿ ಸಿಕ್ಕಿರುವ ತೆಲುಗು ಶಾಸನದ ಪ್ರಕಾರ ಕ್ರಿ. ಶ. 1185 ರಲ್ಲಿ ಗೋಕರ್ಣದೇವರು ಮಲ್ಲಿಕಾರ್ಜುನ ಪಂಡಿತರು ಬಸವಣ್ಣನವರ ಸಮಕಾಲೀನರು. ಸಮವಯಸ್ಕರು ಮತ್ತು ಅನುಯಾಯಿಗಳು. ಅವರಿಗೆ ಬಸವಣ್ಣನವರ ಭೇಟಿಯಾಗಬೇಕಿತ್ತು ಸೋಮನಾಥಪಂಡಿತಾರಾಧ್ಯ ಚರಿತ್ರೆಯ ಪ್ರಕಾರ ಪಂಡಿತಾರಾಧ್ಯರು ಕಲ್ಯಾಣಕ್ಕೆ ಅಮರಾವತಿಯಿಂದ ಹೊರಟರು ದಾರಿಯಲ್ಲಿ ಅವರಿಗೆ ಬಸವಣ್ಣನವರು ಶಿವೈಕ್ಯರಾಗಿ ಒಂದು ವಾರವಾಯಿತೆಂದು ತಿಳಿಯಿತು. ಕಲ್ಯಾಣದ ಮಾರ್ಗಬಿಟ್ಟು ಶ್ರೀ ಶೈಲದ ದಾರಿ ಹಿಡಿದರು ಬಸವಣ್ಣನವರು ಇಲ್ಲದ ಪ್ರಪಂಚದಲ್ಲಿ ತಾನು ಜೀವಿಸಿದ್ದು ಏನು ಪ್ರಯೋಜನ ಎಂದು ಕ್ರಿ. ಶ. 1185 ರಲ್ಲಿ ಲಿಂಗೈಕ್ಯರಾದರು ಎಂದು ವಿವರಿಸಿದರು. ಪಂಡಿತಾರಾಧ್ಯರು 70 ರಿಂದ 80 ವಯಸ್ಸಿನವರಾದ್ದಾಗ ಅವರ ಜನ್ಮ 1105 ರಿಂದ 1115 ರ ಮಧ್ಯ ಆಗಿರಬಹುದು. ಆದ್ದರಿಂದ ಬಸವಣ್ಣನವರ ಜೀವಮಾನ ಕಾಲವು ಕ್ರಿ. ಶ. 1105–1115 ರಿಂದ ಕ್ರಿ. ಶ. 1184 ರವರೆಗೆ ಎಂದು ಹೇಳಬಹುದು ಎಂದು ಶಾಸನದ ಆಧಾರದ ಮೇಲೆ ತಿಳಿಸಿದರು.

ಬಸವಾದಿ ಶರಣರನೇಕರರ ವಿಚಾರದಲ್ಲಿ ಜನನ, ಐಕ್ಯಗಳನ್ನು ಕುರಿತ ಸಂಶೋಧನೆಗಳು ನಡೆಯುತ್ತಲೇ ಬಂದಿವೆ; ನಡೆಯುತ್ತಿವೆ: ಒಮ್ಮೊಮ್ಮೆ ಸಮಾಜ ಜೀವನದಲ್ಲಿ ಆರೋಗ್ಯವನ್ನು ಕದಡಿವೆ. ಪ್ರಸ್ತುತ ಹಾಗೇನೂ ಆಗಿಲ್ಲ. ಡಾ|| ದೀಕ್ಷಿತರ ಅಭಿಪ್ರಾಯವನ್ನು ವಿದ್ವತ್ ಲೋಕ ಹೇಗೆ ಸ್ವಾಗತಿಸುತ್ತದೆ ಎಂಬುದನ್ನು ನಿರೀಕ್ಷಿಸಬೇಕಾಗಿದೆ.

# ಶ್ರೀ ಉದ್ದಾನ ಪಂಚಕಂ

ಸಂಗ್ರಾಹಕರು :
ಬಿ. ಗಂಗಪ್ಪ, ನಿವೃತ್ತ ಅಲಂಕಾರ ಶಾಸ್ತ್ರ ಪ್ರಾಧ್ಯಾಪಕ, ಸಂಸ್ಕೃತ ಮಹಾ ಪಾಠಶಾಲಾ, ಶ್ರೀ

ಕಾಷಾಯಾಂಬರಧಾರಿಣಂ ಪುರಹರ ಪ್ರೇಮಾಸ್ಪದಂ ಯೋಗಿನಮ್ ।
ರುದ್ರಾಕ್ಷೈರ್ವಲಯೈರ್ವಿಭೂಷಿತತನುಂ ಭಸ್ಮ ತ್ರಿಪುಂಡ್ರಾಂಕಿತಂ ॥
ಮಾಯಾತೀತವಿರಾಗಿಪ್ರಂಗವವಿಭುಂ ಶೈವಾಬ್ಧಿರಾಕಾವಿಧುಂ ।
ಉದ್ದಾನಾಭಿಧದೇಶಿಕಗುರುವರಂವಂದೇಮುದಾ ಸಂತತಮ್ ॥

ವಿದ್ಯಾದಾನಸಮಾನಮಥಸೌ ನಾಸ್ತೀತಿಕೇಚಿಜ್ಜನಾಃ ।
ವಿದ್ಯಾಭ್ಯಾಸ ಕೃತೇರ್ವಿದಾಯನಿಲಯಾನ್ ಕುರ್ವಂತಿಸೇವಾಂಪರಾಮ್ ॥
ಕುರ್ವಂತಶ್ಚಪರಾನದಾನಮಧಿಕಂ ತೋಷಾವಹಂ ಪ್ರಾಣಿನಾಮ್ ।
ಯೋಗೀಂದ್ರಸ್ತು ತನೋತಿದಾನಮುಭಯಂ ದಾಸೋಹಮಾಬೋಧಯನ್

ಗೈರ್ವಾಣೀನಿಲಯಶ್ಚಕಾಸ್ತಿ ಚ ಮಹಾವಿದ್ವದ್ಗಣೈಶೋಭಿತಃ ।
ವೇದಭ್ಯಾಸ ರತೋಕ್ತಮಂತ್ರನಿನದೈಃಸಂತೋಷಕಃ ಶ್ರೋತ್ರಯೋಃ ॥
ತರ್ಕವ್ಯಾಕರಣೇತಿಹಾಸ ಕುಶಲೈಃ ಸದ್ಭಾವಮೋದಾವಹಃ ।
ವೇದಾಭ್ಯಾಸ ರತೈಸುಶಿಷ್ಯನಿಮಹೈಃಸಂಶೋಭಿತಸ್ಸಂತತಮ್ ॥

ಯೋಗೀಂದ್ರೈಃ ಶಿವಸತ್ಕುಮಾರ ಗುರುಭಿಶ್ಚಾಶ್ವಾಯರ್ಾಂಗಭಾಷಾವಿದ್ಯಃ ।
ಸಪ್ತಾಹೈಕದಿನೇಧಿಕೃತ್ಯವಿಷಯಂ ಕೂಲಂಕಷಂ ಬೋಧ್ಯತೇ ॥
ಚರ್ಚಾಸಾಂಘಿತಭಾಷಣಾನಿ ಬಹವಃ ಕುರ್ವಂತಿ ವಿದ್ಯಾರ್ಥಿನಃ ।
ಶ್ರೀ ಸಿದ್ದೇಶಕೃಪಾಕರೋತು ಮಹಿಕಂ ವಿದ್ಯಾಮಹಾಮಂದಿರಮ್ ॥

ಭಕ್ತಾಸ್ಸಂತು ವಿಚಾರಪೂರ್ಣಮತಯಃ ಸತ್ಪಾತ್ರದಾನೇರತಾಃ ।
ಸಾಹಾಯ್ಯಾತಿಶಯೇನ ಭೂಪಧನಿಕಾಃ ಸಂಪ್ರಾಪ್ತ ಪೂರ್ಣಾದರಾಃ ॥
ಪಾರಂಪ್ರಾಪ್ಯ ಸಮಾಜಕರ್ಮಕರಣೆ ಬದ್ಧಾದರಾಶ್ಛಾತ್ರಕಾಃ ।
ಗೈರ್ವಾಣೀನಿಲಯಶ್ಚಕಾಸ್ತು ಸುಚಿರಂ ಶ್ರೀ ಸಿದ್ಧಲಿಂಗಾಜ್ಞಯಾ ॥



(ಜೂನ್ ತಿಂಗಳನಂತರದ ಲೇಖನ)

# ಕಾರಣ ಪುರುಷ ಬಸವೇಶ್ವರ ಭಾಗ–7

## ವಚನಗಳ ಸಾಹಿತ್ಯಿಕ ಘನತೆ

– ಡಾ|| ಎಲ್. ಆರ್. ಹೆಗಡೆ, ಸಿದ್ದಾಪುರ, ದಕ್ಷಿಣ ಕನ್ನಡ ಜಿಲ್ಲೆ.

ಬಸವಣ್ಣನ ವಚನಗಳ ಹಿರಿಮೆಯನ್ನು ಕೊಂಡಾಡುವಾಗ ಆಧಾರಪೂರ್ವಕವಾಗಿ ಪ್ರತಿಪಾದಿಸಿದ ಹಿರಿಯ ವಿದ್ವಾಂಸರಲ್ಲಿ ಶ್ರೀ ಎಸ್.ವಿ. ಪರಮೇಶ್ವರ ಭಟ್ಟರು ಒಬ್ಬ ಮುಖ್ಯ ವಿಮರ್ಶಕರು. ಅವರು ಬಸವಣ್ಣನವರ ವಚನಗಳಲ್ಲಿ ರೂಪಾಂಶ ಎಂಬ ಮಹತ್ವದ ಲೇಖನದಲ್ಲಿ ಸಹಜಪ್ರತಿಭಾಸಂಪನ್ನರಾದ ಬಸವಣ್ಣನವರು ಶಬ್ದ-ಶಬ್ದಗಳಲ್ಲಿನ, ಹಾಗೂ ವಾಕ್ಯ ವಾಕ್ಯಗಳಲ್ಲಿನ ಸಂಬಂಧವನ್ನು ಎಷ್ಟು ಕೌಶಲ್ಯಪೂರ್ಣವಾಗಿ ಸಾಧಿಸಿದರೆಂಬುದನ್ನು ಸೋದಾಹರಣವಾಗಿ ವಿವರಿಸಿದ್ದರು.

ಈ ಶೈಲಿಯಲ್ಲಿ ಶಬ್ದಗಳ ಪ್ರಾಸಬಂಧುರವಾದ ಹಿತವಾದ ಶಯ್ಯೆಯಿದೆ. "ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ" ಈ ಮಹಾವಾಕ್ಯವನ್ನು ದಿ.ಡಾ||ರಂ. ಶ್ರೀ ಮುಗುಳಿಯವರು ಜಗತ್ತಿನ ಸಾಹಿತ್ಯಕ್ಕೆ ಕನ್ನಡದ ವೈಚಾರಿಕ ಕೊಡುಗೆಗಳಲ್ಲಿ ಒಂದೆಂದು ಶ್ಲಾಘಿಸಿದ್ದಾರೆ.

ಕರ್ತಾರನ ಕಮ್ಮಟ ಎಂಬ ಈ ರೂಪಕವು ಬಹು ಅರ್ಥಗರ್ಭಿತವಾಗಿದ್ದಂತೆಯೇ ನವೀನವೂ ಆಗಿದೆ.

ಇಹಜೀವನವು ಪರದ ಜೀವನಕ್ಕಿಂತ ಕಡಿಮೆಯಾಗಿಲ್ಲ , ಇಲ್ಲಿ ದೇವರು ಮೆಚ್ಚುವಂತೆ ನಡೆದರೆ ಸಂಸಾರವು ಸಾರಭೂತವಾಗುವುದೆಂದು ಬೋಧಿಸಿದರು. ಜೀವನವೆಲ್ಲವೂ ದೇವನ ಗಣ (ಕಾವನೆಕಾಮುವನ್ನೇ) ಪಾವನಮಾಡುವುದು ಎಂಬ ಕವಿಗಳ ಆಶಯವು ಈ ವಚನದಲ್ಲಿದೆ. "ಸತಿ ಪತಿಗಳೊಂದಾಗಿ ಮಾಡುವ ಭಕ್ತಿ ಹಿತವಪ್ಪದು ಶಿವಂಗೆ' ಎಂಬಲ್ಲಿನ ಸತಿ-ಪತಿ-ಹಿತ ಎಂಬ ಶಬ್ದಗಳಲ್ಲಿ ಪ್ರಯತ್ನವಾಗಿ ಬಂದ ಪ್ರಾಸವು ಮನಸೆಳೆಯುವುದು, ಅಲ್ಲದೆ, ಇಲ್ಲಿ ಸಕಲವೂ ಶಿವಾರ್ಪಣ ಬುದ್ಧಿಯಿಂದ ಉದಾತ್ತವಾದ ಧ್ಯೇಯ ನಿಷ್ಠೆಗಳಿಂದ ನಡೆದರೆ ಸಂಸಾರವು ತ್ಯಾಜ್ಯವಾಗಬೇಕಿಲ್ಲ ಎಂದು ಜನಸಾಮಾನ್ಯರಿಗೆಲ್ಲ ಪ್ರಪಂಚ ಮತ್ತು ಪರಮಾತ್ಮ ಎರಡನ್ನು ಹೊಂದಿಸಿಕೊಂಡು ಹೋಗುವ ಮಾರ್ಗವನ್ನು ತಿಳುಹಿಸಿದರು.

'ಅರಿತರೆ ಶರಣ, ಮರೆತರೆ ಮಾನವ' ಎಂಬ ವಾಕ್ಯಗಳು ಪರಮಾತ್ಮನ ಅರಿವನ್ನು ಪಡೆದುಕೊಂಡ ಮಾನವನು ದೇವರಂಥವನು. ಸಾಮಾನ್ಯ ಮರ್ತ್ಯನಲ್ಲ, ಸಾಮಾನ್ಯ ಮಾನವನಲ್ಲ ಎಂದು ಸೂಚಿಸುತ್ತದೆ.

ವಚನಗಳ ಆದೇ ಲಯ, ಆದೇ ಗಾತ್ರ ಒಟ್ಟು ವಚನಗಳಲ್ಲಿರುವ ಎಲ್ಲ ವಾಕ್ಯಗಳಿಗೂ ಹಬ್ಬಿಕೊಳ್ಳುವಂತೆ ಈ ವಚನಗಳ ವಾಕ್ಯಗಳು ರೂಪಗೊಂಡಿರುತ್ತವೆ.

ಕರಿಯಂಜುವುದು ಅಂಕುಶಕ್ಕಯ್ಯ
ಗಿರಿಯಂಜುವುದು ಕುಲಿಶಕ್ಕಯ್ಯ (ಕುಲಿಶ-ವಜ್ರಾಯುಧ)
ಪಂಚಮಹಾಪಾತಕವಂಜುವುದು
ನಮ್ಮ ಕೂಡಲಸಂಗನ ನಾಮಕ್ಕಯ್ಯ

ಇಲ್ಲಿಯ ಆದಿಪ್ರಾಸ ವಾಕ್ಯಸಮತೋಲನಕ್ಕೆ ಸಹಕಾರಿಯಾಗಿದೆ.

ವಚನ ಲಯಬದ್ಧವಾಗಿಯೂ ಪದ್ಯದ ಕಟ್ಟುನಿಟ್ಟಿಲ್ಲದ ಹೃದ್ಯಗದ್ಯವಾಗಿದೆ ಎಂಬುದನ್ನು ಭಟ್ಟರು ತೋರಿಸಿದ್ದಾರೆ. ಅಲ್ಲದೆ, ವಚನವು ಉಸಿರಿನ ಏರಿಳಿತ, ಭಾವದ ನಾಡಿಯ ಬಡಿತ ಮಿಡಿತಗಳಿಗೆ ತಕ್ಕಹಾಗೆ ಈ ವಚನಗಳಲ್ಲಿ ಅದು ಇದೆ ಎಂದು ತಿಳಿಸಿದ್ದಾರೆ.

ಶ್ರೇಷ್ಠ ಕವಿಗಳೂ ಉತ್ತಮ ವಿಮರ್ಶಕರೂ ಆಗಿರುವ ಶ್ರೀ ಚೆನ್ನವೀರ ಕಣವಿಯವರು ಸಾಹಿತ್ಯದೃಷ್ಟಿಯಿಂದ ಬಸವೇಶ್ವರರ ವಚನಗಳು ಎಂಬ ಆಂಗ್ಲ ಲೇಖನದಲ್ಲಿ

ನೆರೆ ಕೆನ್ನೆಗೆ ತೆರೆ ಗಲ್ಲಕೆ
ಶರೀರ ಗೂಡುವೋಗದ ಮುನ್ನ
ಮುಪ್ಪಿಂದೊಪ್ಪವಳಿಯದ ಮುನ್ನ
ಹಲ್ಲು ಹೋಗಿ ಬೆನ್ನು ಬಾಗಿ
ಅನ್ಯರಿಗೆ ಹಂಗಾಗದ ಮುನ್ನ;
ಕಾಲ ಮೇಲೆ ಕೈಯ್ಯನೂರಿ
ಕೋಲ ಹಿಡಿಯುದ ಮುನ್ನ
...................................
ಪೂಜಿಸು ಕೂಡಲ ಸಂಗಮದೇವನ.

ವಿವರಗಳನ್ನು ಕಾಣುವಲ್ಲಿನ ಸೂಕ್ಷ್ಮದೃಷ್ಟಿ ಎಂಥ ಚಿತ್ರಕಾರನಾದರೂ ಅಸೂಯೆ ಹೊಂದುವಂತಿರುತ್ತದೆ ಎಂದು ತಿಳಿಸಿದ್ದಾರೆ. Sri Basaveswara Commemoration Volume. 1967 Page 451.

"ಕನ್ನಡದಲ್ಲಿ ಉಪಮೆಗಳನ್ನು ಬಸವಣ್ಣನವರಷ್ಟು ಅಧ್ಭುತವಾದ ಗೆಲ್ಮೆಯಿಂದ ಉಪಯೋಗಿಸಿದ ಕನ್ನಡ ಕವಿಗಳಿಲ್ಲ" ಎಂಬ ಅಭಿಪ್ರಾಯವಿದೆ.

ಇದನ್ನು ಸ್ವಲ್ಪ ತಿದ್ದಿ ದೃಷ್ಟಾಂತರೂಪವಾದ ಉಪಮೆಗಳನ್ನು ಎಂದು ತಿಳಿಸಿದರೆ ವಾಕ್ಯದ ಅಭಿಪ್ರಾಯವು ಪೂರ್ತಿ ನಿಜವೆಂದು ಕಾಣುತ್ತದೆ.

ವಾಕ್ಯರೂಪದಲ್ಲೇ ಉಪಮೆಗಳು ಬಂದು ರೂಪಕವು ಸಹ ಸೇರಿಕೊಂಡೇ ಲ್ಲುತ್ತವೆ.

೨೮೪ ಬಿರಿಮುಗುಳಂತೆ ಎನ್ನ ಹೃದಯ
ನಿಮ್ಮ ಶ್ರೀ ಚರಣದ ಮೇಲೆ ಬಿದ್ದರಳುಗೆ.
೧೯೧ ಓತಿ ಬೇಲಿವರಿದಂತೆನ್ನ ಮನವಯ್ಯ,
ಹೊತ್ತುಗೊಂದು ಪರಿಯಪ್ಪ ಗೋಸುಂಬೆಯಂತೆನ್ನ ಮನವು
೨೬೭ ಕರಲ (ಕಲ್ಲು) ಭೂಮಿಯಲ್ಲಿ ಕರೆದ ವೃಷ್ಟಿಯ ತೆರನಂತೆ ?
ಮೇರುವ ಸಾರಿದ ಕಾಗೆ
ಹೊಂಬಣ್ಣವಪ್ಪುದು ತಪ್ಪದು

ಲ್ಲಿ ರೂಪಕವು ದೃಷ್ಟಾಂತ ರೂಪವನ್ನು ತಾಳಿರುತ್ತದೆ.

೨೮೯ ಮರಕ್ಕೆ ಬಾಯಿ ಬೇರೆಂದು
ತಳಕ್ಕೆ ನೀರನೆರೆದರೆ ಮೇಲೆ ಪಲ್ಲವಿಸಿತ್ತು ನೋಡಾ

ಲ್ಲಿ ಜಂಗಮವೇ ಹರನೆಂದು ತಿಳಿದು ಸೇವೆ ಮಾಡುವುದಕ್ಕೆ ದೃಷ್ಟಾಂತವಿದೆ. ಂಗಮರ ಮಹತ್ವವನ್ನು ನೂರಾರು ವಚನಗಳಲ್ಲಿ ಹಲವಾರು ರೀತಿ ತಿಳಿಸಲಾಗಿದೆ. ೂರಾರು ದೃಷ್ಟಾಂತಗಳು ಪ್ರಶ್ನೆಯ ರೂಪದಲ್ಲಿ ಬಂದಿರುವುದೇ ಹೆಚ್ಚಾಗಿದೆ.

ಕೂಡಲ ಸಂಗನ ಶರಣರ ಶ್ರೇಷ್ಠತೆಯನ್ನು ಅವಿಸ್ಮರಣೀಯವಾದ ರೀತಿಯಲ್ಲಿ ರ್ಶಿಸಲಾಗಿದೆ.

೨೦೮ ಮನೆ ನೋಡಾ ಬಡವರು;
ಮನ ನೋಡಾ ಧೀರರು
ಸೋಂಕಿನಲ್ಲಿ ಶುಚಿ; ಸರ್ವಾಂಗ ಕಲಿ
ಪಸರಕ್ಕನುವಿಲ್ಲ; ಬಂದ ತತ್ಕಾಲಕ್ಕುಂಟು
ಕೂಡಲಸಂಗನ ಶರಣರು ಸ್ವತಂತ್ರಧೀರರು

ಇಲ್ಲಿ ಪಸರ ಎಂದರೆ ಪ್ರಸಾರ, ಪ್ರದರ್ಶನ ಎಂದು ಡಾ. ಎಲ್. ಬಸವರಾಜು ರ್ಥ ನೀಡಿದ್ದುಂಟು. ಪಸರ ಎಂದು ಯಾವಾಗಲೂ ಇಟ್ಟ ಅಂಗಡಿಗಳಿಗೆ ಅರ್ಥ-ಸುವುದು ವಾಡಿಕೆಯಾಗಿದೆ. ತತ್ಕಾಲಕ್ಕುಂಟು, ಎಂಬ ವಾಕ್ಯದೊಡನೆ ತಕ್ಕೊಂಡು

ಅರ್ಥಮಾಡಿದರೆ ಈ ಶರಣರು ಯಾವಾಗಲೋ ಒಮ್ಮೆ ಬಂದು ಸೇವೆಯನ್ನು ಕೈಕೊಳ್ಳುವವರು; ಒಂದೆಡೆ, ನೆಲೆನಿಲ್ಲುವರಲ್ಲ ಎಂಬ ಅರ್ಥ ಹೊಳೆಯುತ್ತದೆ.

ಡಾ. ಎಲ್. ಬಸವರಾಜು ಅವರ ಬಸವಣ್ಣನವರ ವಚನಗಳು ಎಂಬ ಗ್ರಂಥದ ವಚನ ಸಂಖ್ಯೆಯನ್ನು ಬಹುಶಃ ವಚನಗಳಿಗೆ ನೀಡಿದ್ದಿದೆ. ಅವರು ಪಸರ 'ಶಬ್ದದ' ಅರ್ಥವನ್ನು ೧೮೭ನೆ ಪುಟದಲ್ಲಿ ನೀಡಿದ್ದಾರೆ.

೧೩೧ .................. "ಜಂಗಮ "ಕ್ಕೆರೆದರೆ "ಸ್ಥಾವರ" ನೆನೆಯಿತ್ತು.

ಇಲ್ಲಿ ಸ್ಥಾವರ ಹಾಗು ಜಂಗಮ ವಿರುದ್ಧ ಪದಗಳನ್ನು ಜೊತೆಯಲ್ಲಿಟ್ಟು, ಜಂಗಮಾರಾಧನೆಯು ಸ್ಥಾನಿಕ ಶಿವಲಿಂಗದ ಆರಾಧನೆಗಿಂತಲೂ ಹಿರಿದೆಂದು ಸೂಚಿಸಲಾಗಿದೆ. ಅಲ್ಲದೆ, ಇದು ತನ್ನ ಇಷ್ಟಲಿಂಗಾರ್ಚನೆಗಿಂತಲೂ ಶ್ರೇಷ್ಠವೆಂದು ಬಸವಣ್ಣ ತಿಳಿಸಿದ್ದಾನೆ.

೨೧೨ "ಮರದ ನೆಳಲಲ್ಲಿದ್ದು ತನ್ನ ನೆಳಲನರಸಬಹುದೇ?
ನಿಮ್ಮ ಶರಣರ ಮುಂದೆ ನಾನೇತರ ಭಕ್ತನಯ್ಯಾ?"
ನಾನೇತರ ಯುಕ್ತನೈಯ್ಯಾ?
ಮುಗಿದ ಕೈಯ ಬಾಗಿದ ತಲೆಯ ಭಕ್ತಕಿಂಕರ

ಎಂಬ ವಿನಯ ನಿಧಿಯಾದ ಅಣ್ಣನು ಜನಪದ ಬಸವಪುರಾಣ" ಕಾರ ಹೇಳುವಂತೆ "ಹಿರಿಯೋರಿಗೆ ಹಿರಿಯೋರು ಬಸವಣ್ಣ!" ಅಂದರೆ ಮಹಾಗುರು! (ಸಂ. ಪಿ. ಕೆ. ರಾಜಶೇಖರ- ಕ. ಸಾ. ಪ. ಬೆಂಗಳೂರು 1981) ೧೬೯ ಸದುವಿನಯವೆ ಸದಾಶಿವನೊಲುಮೆಯ್ಯ ಮೃದುವಚನವೇಸಕಲ ಜಪಂಗಳಯ್ಯ... ಸಕಲತಪಂಗಳಯ್ಯ! ಎಂದು ಉತ್ತಮವಾದ ಸಂಸ್ಕೃತಿಸಂಪನ್ನತೆಯನ್ನು ಅಣ್ಣನು ನುಡಿದನು ನುಡಿದಂತೆ ನಡೆದನು.

೧೮೪ "ಕೂಡಲ ಸಂಗನ ಶರಣರ ಕಂಡು
ಆಡಿ ಹಾಡು ಬದುಕು ಮನವೇ!

೨೯ ನಮ್ಮ ಕೂಡಲ ಸಂಗನ ಶರಣರ
ಬರವೆನ್ನ ಪ್ರಾಣ ಕಂಡಯ್ಯಾ

೨೭೧ ಆವನಾದರೇನು?
ಶ್ರೀ ಮಹಾದೇವನ ನೆನೆವನ ಬಾಯ ತಂಬುಲವ ಮೆಲುವೆ

ಎಂಬಲ್ಲಿಯೂ ಇನ್ನಿತರ ಕಡೆಗಳಲ್ಲಿಯೂ ಸಹ ಶರಣರು ಒಕ್ಕುದನು ತಿನ್ನುವೆ ಎಂದು ಬಸವಣ್ಣನವರು ಹೇಳಿದುದನ್ನು ನಾವು ಅಕ್ಷರಶಃ ಭಾವಿಸದೆ ಗೌರವಿಸುವೆನೆಂಬ

ತಾರ್ಥದಲ್ಲಿಯೇ ತರ್ಕೊಳ್ಳಬೇಕು ಎಂದು ನನಗೆ ಕಾಣುತ್ತದೆ. ೪೨೨ ಸಂಖ್ಯೆಯ ವಚನದಲ್ಲಿ ಎಂಜಲುಂಟೇ ಪ್ರಸಾದವಿದ್ದೆಡೆಯಲ್ಲಿ? " ಶಿವಶರಣರು ತಿಂದು ಉಳಿದುದು ಎಂದೇ ಸೂಚಿತವಾಗಿದೆ.

೧೬೨ ಮಾಡುವಂತಿರಬೇಕು ಮಾಡದಂತಿರಬೇಕು!
ಮಾಡುವ ಮಾಟದೊಳಗೆ ತಾನಿಲ್ಲದಿರಬೇಕು
ನೋಡುವಂತಿರಬೇಕು ನೋಡದಂತಿರಬೇಕು!
ನೋಡುವ ನೋಟದೊಳಗೆ ತಾನಿಲ್ಲದಿರಬೇಕು!!
ನಮ್ಮ ಕೂಡಲ ಸಂಗಮದೇವರ
ನೆನೆವುತ್ತ ನೆನೆವುತ್ತ ನೆನೆಯದಂತಿರಬೇಕು.

ಇಲ್ಲಿ ತಾನೆಂಬ ಅಹಂಕಾರವನ್ನು ವರ್ಜಿಸಿ, ನಿಷ್ಕಾಮಕರ್ಮದಿಂದ ಕಾಯಕವನ್ನು ಮಾಡಿ, ಧ್ಯಾನದಲ್ಲಿ ಪರವಶತೆಯನ್ನು ತಾಳುವ ಕರ್ಮಯೋಗವನ್ನು ಅತಿ ಸರಳವಾದ ಮಾತುಗಳಲ್ಲಿ ತಿಳುಹಿಸಲಾಗಿದೆ.

೨೮೭ ಇರುಳೆಂದರಿಯೆ, ಹಗಲೆಂದರಿಯೆ ಎಂಬ ಪೂಜೆಯ ವ್ಯಾಮರೆವು ಇನ್ನೊಂದೆಡೆ. ಇದೆ.

೨೯೨ ಸ್ವಾಮಿ, ಎನ್ನ ಹೃದಯದಲ್ಲಿ ನಿಮ್ಮ ಚರಣದುಂಡಿಗೆಯನೊತ್ತಯ್ಯ.

ಇಲ್ಲಿ ಹೃದಯವೆಂಬ ಪೆಟ್ಟಿಗೆಯ ಮೇಲೆ ಚರಣ ಎಂಬ ಉಂಗುರದ ಮುದ್ರೆಯೊತ್ತಿದರೆ, ಇದು ಕೂಡಲಸಂಗನದು ಎಂಬುದಕ್ಕೆ ಗುರುತಾಗುತ್ತದೆ!

ಭವಭೂತಿಯು 'ಏಕೋರಸ ಕರುಣ' ಏವ ಎಂದು ತನ್ನ ಶ್ರೇಷ್ಠವಾದ ಉತ್ತರರಾಮ ಚರಿತದಲ್ಲಿ ರುಜುಗೊಳಿಸಿದನು. ಬಸವಣ್ಣನ ವಚನಗಲ್ಲಿ 'ಭಕ್ತ್ಯೈಕಾ ವಿಶಿಷ್ಟತಿ. "ಒರೆತುದಯ್ಯ ಭಕ್ತಿರಸ" ಎಂದು ಬಸವಣ್ಣ ಬರೆದ ಮಾತು ಸಾರ್ಥಕವಾಗಿದೆ.

ಇಲ್ಲಿ ವಚನಗಳು ಭಾವನಿರ್ಭರತೆಯಿಂದ ತೊಯ್ದುಕೊಂಡಿವೆ.

೨೮೮ ನಿಮ್ಮ ನೋಟವನಂತ ಸುಖ
ನಿಮ್ಮ ಕೂಟ ಪರಮ ಸುಖ
ಅಷ್ಟಕೋಟಿ ರೋಮಂಗಳೆಲ್ಲ
ಕಂಗಳಾಗಿ ನೋಡುತ್ತಿದ್ದೆ..................

೨೮೩ ಅಂಗೈಯೊಳಗಣ ಲಿಂಗವ ನೋಡುತ್ತ
ಕಂಗಳು ಕಡೆಗೋಡಿವರಿವುತ್ತ ಸುರಿವುತ್ತ ಎಂದಿಪ್ಪೆನೋ ?
ನೋಟವೇ ಪ್ರಾಣವಾಗಿ ಎಂದಿಪ್ಪೆನೋ !
ಕೂಟವೇ ಪ್ರಾಣವಾಗಿ ಎಂದಿಪ್ಪೆನೋ !

೨೨೮ ಗಿಳಿಯ ಪಂಜರದಿಕ್ಕೆ, ಸೊಡರಿಂಗೆಣ್ಣೆಯನೆರೆದು,
ಬತ್ತಿಯನಿಕ್ಕಿ ಬರವ ಹಾರುತ್ತಿದ್ದೆನೆಲೆಗವ್ವ…………………

ಇಲ್ಲಿನ ಶರಣಸತಿ ಲಿಂಗಪತಿ ಭಾವದ ವಿರಹಿಣಿಯ ಪ್ರತೀಕ್ಷೆ ಭಾವಗೀತೆಯ ರೂಪದಲ್ಲೇ ವ್ಯಕ್ತವಾಗಿದೆ.

೩೯೧ನೆಯ ದೀರ್ಘ ವಚನದಲ್ಲಿ ಎಂಥ ಪರಿಸ್ಥಿತಿಯಲ್ಲಿಯೂ ಶಿವಲಿಂಗಾರ್ಚನೆ, ಜಂಗಮ ದಾಸೋಹಗಳನ್ನು ಬಿಡುವುದಿಲ್ಲ ಎಂಬ ಬಸವಣ್ಣನ ದೃಢ ನಿಷ್ಠೆಯ ಉದ್ಘೋಷವೂ ಯಾವ ಮಹಾಕವಿಯ ಚಿತ್ರಣಕ್ಕೂ ಕಡಿಮೆಯದಲ್ಲ. ಇಲ್ಲಿನ ಹಂಗು ಮುಂದಿನ ೩೯೨ನೇ ವಚನದ ವೀರವ್ರತಿಯ ಭಾಷೆಯು ರಸದ ಔನ್ನತ್ಯವನ್ನು ಪಡೆದಿರುತ್ತದೆ.

ಬಸವಣ್ಣನವರ ವಚನಗಳ ಅರ್ಥದ ಹುರುಳಿನಿಂದ ಮಹಾವಾಕ್ಯಗಳಾಗಿರುವಂತಯೇ ಭಾವದ ತೀವ್ರತೆಯನ್ನೊಳಗೊಂಡು ಮಹಾಕಾವ್ಯದ ಸತ್ತ್ವವನ್ನು ತೋರುವ ಘನತೆಯನ್ನು ಹೊಂದಿವೆ.

ಕನ್ನಡದ ಒಬ್ಬ ಶ್ರೇಷ್ಠ ವಿಮರ್ಶಕರಾದ ದಿ. ಡಾ|| ರಂ. ಶ್ರೀ ಮುಗುಳಿಯವರು ತಮ್ಮ “ ಮಹಾಕೃತಿ ” ಎಂಬ ಗ್ರಂಥದಲ್ಲಿ ಸಮಗ್ರನಿರ್ಮಿತಿ. ಒಂದು ಪದ್ಯದಲ್ಲಿ ಕೂಡ ಇರಬಹುದು. ಆದರಲ್ಲಿ ಸಮಗ್ರತೆ ಇರಬೇಕು ಎಂದು ಬರೆದುದ್ದುಂಟು.

ಬಸವಣ್ಣನವರ ನೂರಾರು ವಚನಗಳು ತಮ್ಮಷ್ಟಕ್ಕೆ ತಾವೇ ಸಮಗ್ರನಿರ್ಮಿತಿಯನ್ನೊಳಗೊಂಡಿವೆ. ಸಮಷ್ಟಿಯಲ್ಲಿ ಅವು ಒಂದು ಮಹಾವ್ಯಕ್ತಿತ್ತ್ವವನ್ನು ಆದರ ಆತ್ಮವಿಕಾಸದ ಮಜಲುಗಳನ್ನು ಹಂತ ಹಂತವಾಗಿ ಚಿತ್ರಿಸಿ ಸಮಗ್ರ ವ್ಯಕ್ತಿತ್ವದ ದರ್ಶನವನ್ನು ನೀಡುತ್ತವೆ. ಇಲ್ಲಿನ ಮಹಾಶೈಲಿಯ ಒಂದು ಉದಾಹರಣೆ.

೩೯೦ ಕಿಗ್ಗಡಲ ರಕ್ತದ ಹೊನಲಲ್ಲಿ ಕಡಿದು ಮುಳುಗಾಡುವ
ಕೊಳುಗುಳವ ಕಂಡು ಪರಿಣಾಮಿಸುವಂತೆ
ಆನು ಪರಿಣಾಮಿಸುವೆನಯ್ಯ, ಕೂಡಲ ಸಂಗಮದೇವ
ನೀ ಬಂದೆನ್ನ ಬೇಡಿದರೆ.

ಒಡೆಯಂಗೆ ಒಡವೆಯನೊಪ್ಪಿಸಲಾರದೆ ನೊರೆ ಇಡುವ ಮನವ ನಾನೇನೆಂಬೆ? ನೆತ್ತಿಯಲಿ ಆಲಗ ಶಿರುಹುವಂತಪ್ಪ ವೇದನೆಯಹುದೆನಗೆ ಕೊಯ್ದ ಮೂಗಿಂಗೆ ಕನ್ನಡಿಯ ತೋರುವಂತಪ್ಪ ವೇದನೆಯಹುದೆನಗೆ. ಬೆಂದ ಹುಣ್ಣ ಕಂಬಿಯಲ್ಲಿ ಕೀಸುವಂತಪ್ಪ ವೇದನೆಯಹುದೆನೆಗೆ. ಕೂಡಲ ಸಂಗಮದೇವಾ ಮಾಡಿ ನೋಡುವಹಗರಣವ ಮಾಡಿಹೆನೆಂದರೆ ಮನಕೆ ಮನ ನಾಚದೇ ?

ಒಣಗಸಿ ಎನ್ನ ಘಣ ಘಣನೆಲನೆ ಮಾಡಿದರೆಯೂ ಎನ್ನ ಹೆಣನ ಮೇಲೆ ಕಂಬಿಟ್ಟೆಂಡರೆಯೂ ಹರಣವುಳ್ಳನ್ನಕ್ಕ ನಿಮ್ಮ ಬಳಲದೆ ನೆನೆವುದ ಮಾಣೆನು.

ಈ ಪ್ರತಿಜ್ಞೆಯ ತೀವ್ರತೆ ಅಸಾಧಾರಣವಾದುದು,

ಬಸವಣ್ಣನವರ ವಚನಗಳಿಗೆ ಭಕ್ತಿಯೇ ಸ್ಥಾಯಿಯಾಗಿದೆ ಇವರ ಸಾವಿ-ಸಾರು ವಚನಗಳು ನಷ್ಟವಾಗಿದ್ದರೂ ಉಳಿದಿರುವ ಒಂದು ಸಾವಿರ ಮುನ್ನೂರಕ್ಕಿಂತ ಹೆಚ್ಚಾಗಿರುವ ಅವರ ವಚನಗಳಲ್ಲಿ ಭಕ್ತಿಯು ರಸದ ಮಟ್ಟಕ್ಕೆ ಏರಿ, ಅನುಭಾವ ರಸವಾಗಿ ಪರಿಣಮಿಸಿದೆ. ಮಹಾವ್ಯಕ್ತಿಯಾದ ಬಸವಣ್ಣನ ರಚನೆಗಳಲ್ಲಿ ಉಳಿದಿರುವ ವಚನಗಳು ಆತ ಮಹಾಕವಿಯೂ ಆಹುದೆಂಬುದನ್ನು ಸ್ಪಷ್ಟಗೊಳಿಸುತ್ತವೆ.

(ಮುದುವರಿಯುತ್ತದೆ)

## ವಿಶ್ವಪ್ರಪಂಚ

ಮಡಕೆ ದೈವ, ಮೊರ ದೈವ, ಬೀದಿಯ ಕಲ್ಲು ದೈವ, ಹಣಿಗೆ ದೈವ, ಬಿಲ್ಲನಾರಿದೈವ ಕಾಣಿರೊ ! ಕೊಳಗ ದೈವ, ಗಿಣ್ಣಿಲು ದೈವ ಕಾಣಿರೋ! ದೈವ ದೈವವೆಂದು ಕಾಲಿಡಲಿಂಬಿಲ್ಲಾ !! ದೈವನೊಬ್ಬನೇ ಕೂಡಲ ಸಂಗಮ ದೇವ

ಅರಗು ತಿಂದು ಕರಗುವ ದೈವವ, ಉರಿಯ ಕಂಡರೆ ಮುರುಟುವ ದೈವವನೆಂತು ಸರಿಯೆಂಬೆನಯ್ಯಾ? ಅವಸರ ಬಂದರೆ ಮಾರುವ ದೈವವ ನೆಂತು ಸರಿಯೆಂಬೆನಯ್ಯಾ ? ಅಂಜಿಕೆಯಾದರೆ ಹೂಳುವ ದೈವವನೆಂತು ಸರಿಯೆಂಬೆನಯ್ಯಾ? ಸಹಜಭಾವ ನಿಜೈಕ್ಯ ಕೂಡಲಸಂಗಮದೇವನೊಬ್ಬನೇ ದೇವ.

ಎತ್ತೆತ್ತ ನೋಡಿದತ್ತತ್ತ ನೀನೇ ದೇವಾ. ಸಕಲ ವಿಸ್ತಾರದ ರೂಹು ನೀನೇ ದೇವಾ. ವಿಶ್ವತೋಚಕ್ಷು ನೀನೇ ದೇವಾ. ವಿಶ್ವತೋಮುಖ ನೀನೆ ದೇವಾ. ವಿಶ್ವತೋ ಬಾಹು ನೀನೆ ದೇವಾ. ವಿಶ್ವತೋಪಾದ ನೀನೆ ದೇವಾ ಕೂಡಲ ಸಂಗಮದೇವಾ!

—ಶ್ರೀ ಬಸವೇಶ್ವರ.

# ಯುವ ಪೀಳಿಗೆಯಲ್ಲಿ ವೇದಾಂತವನ್ನು ಬಿತ್ತಿದ ಯುಗ ಪುರುಷ ಸ್ವಾಮಿ ಚಿನ್ಮಯಾನಂದಜೀ

— ಪೊಯಕ್ಕರ ಕೆ. ಗಣೇಶ್, ಪೋರ್ಟ್‌ರಸ್ತೆ, ಕಾಸರಗೊಡು, 671121 ಕೇರಳ

ಭಗವದ್ಗೀತೆಯ ಮಹತ್ವವನ್ನು ಕುರಿತು ಒಂದಿಷ್ಟು ಅರಿಯ ಬೇಕಾದರ
ಸ್ವಾಮೀ ಚಿನ್ಮಯಾನಂದಜೀಯವರ ಭಾಷಣವನ್ನು ಕೇಳಬೇಕು, ವಕೀಲರು
ವೈದ್ಯರು, ಅಧ್ಯಾಪಕರು, ವಿದ್ಯಾರ್ಥಿಗಳು, ವ್ಯವಸಾಯಿಗಳು, ಸಿನೆಮಾ-ನಾಟ
ರಂಗದವರು, ರಾಜಕಾರಣಿಗಳು.........ಹೀಗೆ ವರ್ಗ ಭೇದ, ವ್ಯಕ್ತಿ ಭೇದವಿಲ್ಲದ
ಪ್ರತಿಯೊಬ್ಬರೂ ತೀವ್ರಾಸಕ್ತರಾಗಿ ಸ್ವಾಮೀಜಿಯವರ ಕಾರ್ಯಕ್ರಮಗಳಲ್ಲ
ಅಧಿಕ ಸಂಖ್ಯೆಯಲ್ಲಿ ಭಾಗವಹಿಸುತ್ತಿದ್ದರು. ಭಗವದ್ಗೀತೆಯ ಮಹತ್ವದ ಕುರಿತ
ಪ್ರವಚನವನ್ನು ಎಸಳೆಸಳಾಗಿ, ಮಂತ್ರ ಮುಗ್ಧರಾಗಿರುವ ಜನಸ್ತೋಮದ ಮುಂದ
ಹರಡಲು ಅವರಿಂದ ಮಾತ್ರ ಸಾಧ್ಯ ಎಂಬ ಅಭಿಪ್ರಾಯ ಸಾಮಾನ್ಯ ಎಲ್ಲರಲ್ಲೂ ಇತ್ತು

ಕಳೆದ ನಾಲ್ಕು ದಶಕಗಳಿಂದ ದೇಶದ ಉದ್ದಗಲಕ್ಕೆ ಹಾಗೂ ಯೂರೋಪ್
ಅಮೇರಿಕ ಮತ್ತಿತರ ಪಾಶ್ಚಾತ್ಯರಾಷ್ಟ್ರಗಳಲ್ಲಿ ಅಲ್ಲದೆ ಸಿಂಗಾಪುರ-ಕುವೈತ್
ಮುಂತಾದೆಡೆ ಗೀತೆ, ಉಪನಿಷತ್ ಮುಂತಾದ ಆಧ್ಯಾತ್ಮಿಕ ಗ್ರಂಥಗಳ ಕುರಿತ
ಪ್ರವಚನಗಳನ್ನು ನಡೆಸಿರುವ ಸ್ವಾಮೀಜಿ ದೇಶದ ಒಳಗೂ ಹೊರಗೂ ಅಸಂಖ್ಯಾತ
ಅಭಿಮಾನಿಗಳನ್ನು, ಅನುಯಾಯಿಗಳನ್ನು ಹಾಗೂ ಆರಾಧಕರನ್ನು ಹೊಂದಿದ್ದರು.

ಇತ್ತೀಚಿನ ವರ್ಷಗಳಲ್ಲಿ ವಿದೇಶರಾಷ್ಟ್ರಗಳಲ್ಲಿ ಹಿಂದೂ ಸಂಘಟನೆಯ ಬಗ್ಗೆ
ತೀವ್ರ ಪ್ರಚಾರಕ್ಕಿಳಿದ ಸ್ವಾಮೀಜಿ ಇದೇ ಆಗಸ್ತ್ 6 ರಂದು ಸ್ವಾಮಿ ವಿವೇಕಾನಂದರ
ಚಿಕಾಗೋ ಕಾರ್ಯಕ್ರಮದ ನೂರನೇ ವಾರ್ಷಿಕದಲ್ಲಿ ಭಾಗಹಿಸುವವರಿದ್ದರು
'ಗ್ಲೋಬಲ್ ವಿಷನ್ 2000' ಎಂದೇ ಅರಿಯಲ್ಪಡುವ ಈ ಕಾನ್ಫರೆನ್ಸ್‌ನಲ್ಲಿ ಸ್ವಾಮಿ
ಯವರನ್ನು 'ಹಿಂದೂಯಿಸಂನ ಆಚಾರ್ಯ' ಎಂದು ಗೌರವಿಸಲು ತೀರ್ಮಾನಿ
ಸಲಾಗಿತ್ತು.

ಹಾಗೆಯೇ ಆಗಸ್ಟ್ 23ರಂದು ಚಿಕಾಗೋದಲ್ಲಿ ನಡೆಯಲಿದ್ದ ಲೋಕ ಮತ
ಸಮ್ಮೇಳನದ ಉದ್ಘಾಟನಾ ಭಾಷಣವನ್ನು ಸ್ವಾಮೀಜಿ ಮಾಡುವವರಿದ್ದರು. ಇಲ್ಲಿ
ಹಿಂದೂ ಮತವನ್ನು ಪ್ರತಿನಿಧೀಕರಿಸಿ ಸ್ವಾಮೀಜಿಯವರು ಮಾತನಾಡಲಿದ್ದರು
ವಿಶ್ವದ ಇತರ 13 ಪ್ರಧಾನ ಮತಗಳ ಪ್ರತಿನಿಧಿಗಳೂ ಮಾತನಾಡಲಿದ್ದರು
ಸ್ವಾಮೀಜಿಯವರು ಅಮೇರಿಕದಿಂದ ಮುಂದಿನ ತಿಂಗಳ ಆರಂಭದಲ್ಲಿ ಲಂಡನ್‌ಗೆ
ಹೋಗುವ ಕಾರ್ಯಕ್ರಮವಿತ್ತು.

ಇಂಗ್ಲೀಷ್‌ನಲ್ಲಿ ನಿರರ್ಗಳವಾಗಿ ಭಾಷಣ ಮಾಡುವ ಸ್ವಾಮೀಜಿಯವರು
ಂದೂ ಮತವನ್ನಲ್ಲದೆ ಇತರ ಮತಗಳ ಕುರಿತೂ ಅಧ್ಯಯನ ನಡೆಸಿರುವರು.
ೀಡಿಯೋಗಳಲ್ಲಿ ಅವರ ಭಾಷಣವನ್ನು ಆಗಾಗ ಪ್ರಸಾರ ಮಾಡಲಾಗುತ್ತಿತ್ತು.
ದನ್ನು ಶ್ರದ್ಧೆ ಹಾಗೂ ಭಕ್ತಿಯಿಂದ ಕೇಳುತ್ತಿದ್ದವರ ಸಂಖ್ಯೆ ಕಮ್ಮಿ ಏನೂ
ಗಿರಲಿಲ್ಲ.

ಹಸಿದ ಹೊಟ್ಟೆಗಳೇ ಅಧಿಕವಾಗಿರುವ ಈ ನಾಡಿನಲ್ಲಿ ಗೀತಾಜ್ಞಾನಪಠನದಿಂದ
ಲ್ಲವೇ ಕೇಳುವುದರಿಂದ ಏನು ಪ್ರಯೋಜನವೆಂಬ ಪ್ರಶ್ನೆಗೆ ಅವರಲ್ಲಿ ಉತ್ತರವಿದೆ.
ಲವು ಬಾರಿ ಗೀತೆಯನ್ನು ಓದುವುದರಿಂದ ಅದಕ್ಕೆ ಪರಿಹಾರ ಸಿಕ್ಕುವುದು
ನ್ನುತ್ತಾರೆ ಸ್ವಾಮೀಜಿ. ಭಗವದ್ಗೀತೆಯಲ್ಲಿ ಖ್ಯಾತರಾಗಿರುವ ಪಂಡಿತರಂತೆ
ಿನ್ಮಯಾನಂದ ಸ್ವಾಮೀಜಿಯವರು ಸಮಾಜಕ್ಕೆ ಮೌಲಿಕವಾದ ಯಾವ ಸಂಭಾವನೆ
ಯನ್ನು ನೀಡಿದ್ದಾರೆಂದು ಕೇಳುವವರಿರಬಹುದು. ಆದರೆ ಗೀತೆ ಹೇಳಿ ಕೊಡುವುದನ್ನು
ಂದು ಪ್ರಚಾರವಾಗಿ ಉಪಯೋಗಿಸಿಕೊಳ್ಳದೆ ಮೌಲಿಕತೆಯ ಉತ್ತಮ ಸೇವೆ
ಯಾಗಿ ಅವರು ಲೆಕ್ಕ ಹಾಕಿದರು. ಶ್ರುತಿಯೂ ಸ್ಮೃತಿಯೂ ಮೂಲಾಧಾರವಾಗಿರುವ
ಾರತದ ಸಂಸ್ಕೃತಿಗೆ ಅದು ಅನಿವಾರ್ಯವೂ ಹೌದು.

**ೀತಾಜ್ಞಾನ ಯೋಗಿ :** ರುದ್ರಾಕ್ಷಿ ಮಾಲೆಯನ್ನು ಹಾಕಿಕೊಂಡು ಜೀನ್ಸ್
್ಯಾಡ್‌ಮಿಂಟನ್ ಆಡುವ ವಿದ್ಯಾರ್ಥಿಯನ್ನು ಕಂಡು ತಮಾಷೆ ಮಾಡಿದವರು ಮುಂದೆ
ಂದು ದಿನ ಅದೇ ವ್ಯಕ್ತಿ ಎಲ್ಲವನ್ನು ಉಪೇಕ್ಷಿಸಿ ಒಬ್ಬ ಗೀತಾಜ್ಞಾನ ಯೋಗಿಯಾಗುವ
ಂದು ಯಾರೂ ಅಂದಾಜಿಸಿರಲಾರರು.

ಕಾಲೇಜು ವಿದ್ಯಾಭ್ಯಾಸವನ್ನು ಪೂರ್ತಿಗೊಳಿಸಿದ ಬಳಿಕ ಮುಂಬಯಿಯಲ್ಲಿ
್ಯಾಟರ್‌ನಲ್ಲಿ ಸ್ವಲ್ಪ ಸಮಯ ದುಡಿದರು. ಆಗ, ದಿನ-ವಾರ-ಮಾಸಪತ್ರಿಕೆಗಳಿಗೆ
ರಹಗಳನ್ನು ಕಳಿಸುತ್ತಿದ್ದರು. ನೆಹರೂ ಅವರ 'ನ್ಯಾಷನಲ್ ಹೆರಾಲ್ಡ್' ಗೆ ಖಾಯಂ
ಗಿ ಬರೆಯುತ್ತಿದ್ದರು. ಆದರೆ ಯಾರ ಮುಂದೆಯೂ ತಲೆ ತಗ್ಗಿಸಿ ಬದುಕುವುದು
ವರಿಗೆ ಇಷ್ಟವಿರಲಿಲ್ಲ. ಹಾಗಾಗಿ ಆ ವೃತ್ತಿಯಲ್ಲಿ ಹೆಚ್ಚುದಿನ ಮುಂದುವರಿಯುವುದ-
್ಕಾಗಲಿಲ್ಲ.

ನೆಹರೂ ಅವರ ಪತ್ರಿಕೆಗೆ ಬರೆಯುತ್ತಿದ್ದಾಗಲೇ ಸ್ವಾತಂತ್ರ್ಯ ಸಂಗ್ರಾಮದಲ್ಲಿಳಿದು
ೆಮನೆ ಸೇರಬೇಕಾಯಿತು. ರೋಗಪೀಡಿತರಾದ ಅವರು ಶಿವಾನಂದಸ್ವಾಮಿಯವರ
ಲವು ಲೇಖಗಳನ್ನು ಓದಿದರು. ಹಾಗೆ ಸೆರೆಮನೆಯಿಂದ ಹೊರಬಂದ ಬಳಿಕ ಸ್ವಾಮಿ
ಾನಂದರನ್ನು ಹುಡುಕಿ ಹಿಮಾಲಯಕ್ಕೆ ಹೋದರು.

ಈ ಮಧ್ಯೆ ಲಕ್ನೋಗೆ ಹೋಗಿ ಕಾನೂನು ಪದವಿ ಗಳಿಸಿ ಮತ್ತೆ ಮುಂಬಯಿಗೆ
ಂದಿದ್ದರು. ಆ ವೇಳೆಗೆ ಅವರ ಸಂಬಂಧಿಯಾದ ಲಾಯರ್ ಭಾಸ್ಕರ ಮೆನನ್ ಅಲ್ಲಿ
್ಯಾಸ ಜೀವನ ನಡೆಸುತ್ತಿದ್ದರು. ಸ್ವಾಮೀಜಿಯವರಿಗೂ ಅದು ಹಿಡಿಸಿತು. 6-7
ರ್ಷ ಆಶ್ರಮವಾಸಿಯಾದರು.

ಗಡ್ಡ ಬೆಳೆಸಿ, ಕೂದಲು ಬೆಳೆಸಿ, ಕತ್ತಿನಲ್ಲಿ ರುದ್ರಾಕ್ಷಿಮಾಲೆ ಹಾಕಿಕೊಂಡು ಮೂಗಿನಮೇಲೆ ಕನ್ನಡಕವನ್ನೇರಿಸಿಕೊಂಡು ಹೆಗಲಮೇಲೆ ಚೀಲವನ್ನು ತೂಗು ಹಾ ರುವ ಈ ಎಂ.ಎ ಹಾಗೂ ಕಾನೂನು ಪದವೀಧರ ಯುವಕನನ್ನು ಕಂಡು ಊರಿನಲ್ಲಿ ಬಂಧು, ಮಿತ್ರ, ಪರಿಚಿತರಿಗೆ ಆಶ್ಚರ್ಯವಾಗದಿರಲಿಲ್ಲ. ಆ ವೇಳೆಗೆ ಸಂಸ್ಕೃತವನ ಅವರುಚೆನ್ನಾಗಿ ಅಭ್ಯಾಸ ಮಾಡಿದ್ದರು.

1991 ರಲ್ಲಿ ಚಿನ್ಮಯ ಇಂಟರ್‌ನ್ಯಾಷನಲ್ ಫೌಂಡೇಷನ್ ಸಂಘಟಿಸಿ 'ಚಾಂಪಿ ಗೀತಾ-ಲ್ಯಾಂಪ್ ವಾಷಿಂಗ್ ಟನ್' ಒಂದು ವಿಶೇಷವಾಗಿತ್ತು ('ಗೀತಾ ಚಾಂಟಿಂಗ್' ಚಿನ್ಮಯ ವಿದ್ಯಾಲಯಗಳಲ್ಲಿ ಅತಿ ಪ್ರಧಾನವಾದುದು.)

'ಚಾಂದ್ ಗೀತಾ-ಲ್ಯಾಂಡ್ ಗಂಗಾ' ಎಂದು ಇದಕ್ಕೆ ಮೊದಲು ಹೆಸರ ಲಾಗಿತ್ತು. ಆದರೆ 'ಲ್ಯಾಂಡ್‌ಗಂಗಾ' ಎನ್ನುವುದು ಹಿಂದಿ ಆಚಾರ ಪ್ರಕಾ ಮರಣಾನಂತರದ ಒಂದು ಆಚರಣೆಯಾಗಿದ್ದುದರಿಂದ 'ಗಂಗಾ'ವನ್ನು ಕೈ ಬಿ 'ವಾಷಿಂಗ್‌ಟನ್' ಸೇರಿಸಲಾಯಿತು. ಸ್ಪರ್ಧೆಯಲ್ಲಿ ಚಲಾಯಿಸಿ ವಿಭಾಗದ ಮಕ್ಕಳಿಂ ಕಾಲೇಜು ಮಟ್ಟದವರೆಗೆ ಬೇರೆ ಬೇರೆ ವಿಭಾಗಗಳಲ್ಲಿ ನೂರಾರು ಮಕ್ಕಳು ಭಾ ವಹಿಸಿದ್ದರು. ಪ್ರಥಮ ಬಹುಮಾನ ಗೆಲ್ಲುವ ಇಬ್ಬರು ಮಕ್ಕಳಿಗೆ ವಿಶ್ವಪರ್ಯಟನೆ ಅವಕಾಶವಿತ್ತು.

ಮುಂದಿನ ಡಿಸಂಬರ್ 29 ರಿಂದ ಜನವರಿ 4 ರವರೆಗೆ ಕೇರಳದ ಕಣ್ಣಾನೂ ನಲ್ಲಿ ಅಖಿಲ ಭಾರತ ಮಟ್ಟದ ಗೀತಾ ಪ್ರವಚನೆಯ ಹಾಗೂ ಸ್ಪರ್ಧೆಯ ಕಾರ್ಯಕ್ರಮ ವನ್ನು ಇರಿಸಿಕೊಳ್ಳಲಾಗಿದೆ.

"ಚಿನ್ಮಯಾ" ಎಂಬ ಪದದ "ಜ್ಞಾನ ಸ್ವರೂಪ" ಎಂದಾಗಿತ್ತು. ವೇದೋ ನಿಷತ್ತುಗಳನ್ನು ಹಾಗೂ ಭಗವದ್ಗೀತೆಯನ್ನು ಕಂಠಪಾಠ ಮಾಡಿಕೊಂಡಿರುವ ಅವರ ಆ ಹೆಸರು ಹೊಂದಿ ಬಂತು. ಭಾರತದ ಒಳಗೂ ಹೊರಗೂ ಹಿಂದೂತ್ವ ಪ್ರಚಾರಕರಾಗಿದ್ದರು ಅವರು.

ಸಮಾಜದ ಗಣ್ಯರೇ ಅಧಿಕವಾಗಿ ಸ್ವಾಮೀಜಿಯವರ ಅನುಯಾಯಿಗಳಾಗಿದ್ದರು. ದುರಾಗ್ರಹಿ ತತ್ವ ಚಿಂತಕರನ್ನು ತನ್ನ ಮಾತಿನ ಮೋಡಿಯಿಂದ ವಶೀಕರಿಸಲು ಅವರಿಂ ದಾಗಿತ್ತು. ಶಬ್ದವೂ ಚಿಂತೆಯೂ ತಮ್ಮೊಳಗಿರುವ ಲಯನವನ್ನು ಪರಿಪೂರ್ಣಗೊ ಳಿಸುವಂತೆ ಮಾಡಿದ ವಾಗ್ಮಿ ಅವರಾಗಿದ್ದಾರೆ.

**ಬಾಲ್ಯ :–** ನ್ಯಾಯಾಧೀಶರಾಗಿದ್ದ ತ್ರಿಶೂರಿನ ವಡಕ್ಕೆ ಕುರುಪತ್ತ್ ಕುಟ್ಟನ ಮೆಗಿನ್ ಅವರ ಹಾಗೂ ತ್ರಿಪ್ಪುಣಿತ್ತುರ ಹೂತಾಂಪಳ್ಳಿಯ ಮಾಂಕು ಅಮ್ಮ ಯಾ ಪಾರುಕುಟ್ಟಿ ಅಮ್ಮ ಅವರ ಪುತ್ರನಾಗಿ 1916ರ ಮೇ 8ರಂದು ಜನಿಸಿದ

ಪಿ. ಬಾಲಕೃಷ್ಣ ಮೆನನ್ ಯುವಕನಾಗಿದ್ದಾಗ ಯುಕ್ತಿವಾದಿಯಾಗಿದ್ದರು. ಮತದ ಹೆಸರಿನಲ್ಲಿ ಸನ್ಯಾಸಿಗಳೂ ಮಠಾಧಿಪತಿಗಳೂ ಜನರನ್ನು ತಪ್ಪು ಹಾದಿಗೆಳೆಯುತ್ತಿದ್ದಾರೆಂದು ಬಾಲನ್ ಆಗ ನಂಬಿದ್ದರು. ಸ್ವಾಮಿ ಶಿವಾನಂದರ ಹೃಷಿಕೇಶದಲ್ಲಿರುವ ಆಶ್ರಮಾಂತರಿಕ್ಷವು ಅವರ ಮನಸ್ಸಿನಲ್ಲಿ ಪ್ರಶಾಂತಿಯ ಚಿಂತೆಯನ್ನು ಮಾಡಿಸಿತು. ಹಾಗೆ ಅವರು ಸತ್ಯದ ಮಾರ್ಗದಲ್ಲಿ ಜೀವನವನ್ನು ಕೊಂಡೊಯ್ದರು.

ಸ್ವಾಮಿ ವಿವೇಕಾನಂದರ ಪರಿಚಯುವಾಗುವುದರೊಂದಿಗೆ ತೇಜಸ್ವಿಯಾದ ಸನ್ಯಾಸ ಜೀವನಕ್ಕಿರುವ ಒಂದು ವೃತ್ತ ಪೂರ್ತಿಯಾಯಿತು. ಸ್ವಾಮಿ ಶಿವಾನಂದರಿಂದ ಕಾಷಾಯುವನ್ನೂ ಸನ್ಯಾಸ ದೀಕ್ಷೆಯನ್ನು ಸ್ವೀಕರಿಸಿದ ಚಿನ್ಮಯಾನಂದರು ಉತ್ತರ ಕಾಶಿಯಲ್ಲಿ ತಪೋವನ ಮಹಾರಾಜ್ ಎಂಬ ಸನ್ಯಾಸಿ ನಾಯಕರಲ್ಲಿಗೆ ಹೋದರು.

ವೇದಶಾಸ್ತ್ರವನ್ನೂ ಧರ್ಮಸೂತ್ರವನ್ನೂ ಉಪನಿಷತ್ತನ್ನೂ ಚೆನ್ನಾಗಿ ಕಲಿತುಕೊಂಡದ್ದು ಇಲ್ಲಿಂದ. “ಉಪನಿಷತ್ತಿನ ಉತ್ತುಂಗ ತತ್ವ ಚಿಂತೆ ಸಾತ್ವಿಕ ಮನಸ್ಸುಗಳಿಗಾಗಿದೆ. ಭಗವದ್ಗೀತೆ ಸಂಶಯ ಸ್ವಭಾವಕ್ಕೂ ಚಂಚಲ ಮನಸ್ಸಿಗೂ ಪರಿಹಾರವಾಗಿದೆ” ಎಂಬ ತತ್ವದಲ್ಲಿ ಮುಂದುವರಿದ ಸ್ವಾಮೀಜಿ 1951ರಲ್ಲಿ ಗೀತಾ ಜ್ಞಾನ ಯಜ್ಞವನ್ನಾರಂಭಿಸಿದರು. ಹಾಗೆ ಅವರು ಲಕ್ಷೋಪಲಕ್ಷ ಜನರಿಗೆ ಜ್ಞಾನ ಸ್ವರೂಪರಾದರು.

1956ರಲ್ಲಿ ಚಿನ್ಮಯ ಮಿಷನ್ ತಲೆ ಎತ್ತಿತು. ಸಾಂದೀಪನಿ ಸಾಧನಾಲಯ, ಬಾಲ ವಿಹಾರ, ಚಿನ್ಮಯ ವಿದ್ಯಾಲಯಾ, ಹಿಂದೂ ಸಂಸ್ಕಾರ ಪಠನ ಕೇಂದ್ರ ಹೀಗೆ ಇನ್ನೂ ಹಲವಾರು ಧಾರ್ಮಿಕ ಹಾಗೂ ವಿದ್ಯಾಕೇಂದ್ರಗಳು ಆರಂಭವಾದವು.

ರಾಷ್ಟ್ರದ ಆತ್ಮೀಯವೂ ಸಾಂಸ್ಕಾರಿಕವೂ ಆದ ಬೆಳವಣಿಗೆಗೆ ಅವರು ನೀಡಿದ ಅಸಾಧಾರಣ ಸೇವೆಗಾಗಿ ಅವರನ್ನು ‘ಭಾರತದ ಪಿತ’ ಎಂದೂ ಕರೆಯುತ್ತಿವೆ. 60ರ ದಶಕದಿಂದ ಲೋಕ ಅವರನ್ನು ಗುರುತಿಸಿತು.

ಈಗಾಗಲೇ 525 ಗೀತಾ ಯಜ್ಞವನ್ನು ಪೂರ್ತಿಗೊಳಿಸಿರುವ ಅವರು ಸುಮಾರು 40 ವೇದಾಂತ ಪುಸ್ತಕಗಳನ್ನು ರಚಿಸಿದ್ದಾರೆ. 1991ರಲ್ಲಿ ಭಗವದ್ಗೀತೆಯ ಕುರಿತು ಅವರು ಮಾಡಿದ ಪ್ರವಚನಯನ್ನು ರೆಕಾರ್ಡ್ ಮಾಡಲಾಗಿದೆ. ಕ್ಯಾಲಿಫೋರ್ನಿಯಾದ ಪಿಯರ್ಸ್‌ನಲ್ಲಿರುವ ಚಿನ್ಮಯಾ ಮಿಷನ್ನಿನ “ಕೃಷ್ಣಾಲಯ”ದಲ್ಲಿ ಆಗಿದ್ದ ಸುಮಾರು ನೂರು ಗಂಟೆಗಳ ಕಾರ್ಯಕ್ರಮವನ್ನು ವೀಡಿಯೋ ಟೇಪ್‌ನಲ್ಲಿ ರೆಕಾರ್ಡ್ ಮಾಡಲಾಗಿದೆ.

ಸಂದೇಶವಾಹಕ: ಭಾರತೀಯ ಸಂಸ್ಕೃತಿಯ ಸಂದೇಶವಾಹಕನಾಗಿ, ಸ್ನೇಹ ಮತ್ತು ತ್ಯಾಗದ ಅವತಾರ ಪುರುಷನಾಗಿ, ದೇವದೂತನಾಗಿ ಅರಿಯಲ್ಪಡುವ ಸ್ವಾಮಿ ಚಿನ್ಮಯಾನಂದಜೀ ಭಗವದ್ಗೀತೆಯ ಹಾಗೂ ಉಪನಿಷತ್ತಿನ ಸಂದೇಶಗಳನ್ನು ಮತ್ತು ಪಾಠಗಳನ್ನು ಹೇಳಿಕೊಡುವ ಆಚಾರ್ಯನಾಗಿ, ಗುರುದೇವನಾಗಿ ಪ್ರಸಿದ್ಧರು.

ವಾಸ್ತುಶಿಲ್ಪಕ್ಕೆ, ವಿದ್ಯಾಭ್ಯಾಸಕ್ಕೆ, ಆಧ್ಯಾತ್ಮಿಕತೆಗೆ, ಕಲೆಗೆ, ತತ್ವಶಾಸ್ತ್ರಕ್ಕೆ ಅವರು ನೀಡಿದ ಸೇವೆ ವಿಶಾಲವಾದದು. ಕೇರಳದ ಉದ್ದಗಲಕ್ಕೆ ಮಾತ್ರವಲ್ಲ ಕರ್ನಾಟಕ, ಮಹಾರಾಷ್ಟ್ರ, ದೆಹಲಿ, ಕಲ್ಕತ್ತ, ಮದರಾಸು ಮುತ್ತಿತರ ಕಡೆ ಧಾರಾಳ ವಿದ್ಯಾಲಯಗಳು ಸ್ವಾಮೀಜಿಯವರ ಹೆಸರಿನಲ್ಲಿ ಸೇವೆಯಲ್ಲಿವೆ.

ಧೀರತೆಯಿಂದ ಮಾಡುವ ಈ ಮತವು ತನಗೆ ಮುಕ್ತಿಯನ್ನೂ ಇತರರಿಗೆ ಭಕ್ತಿಯನ್ನು ನೀಡುವುದೆಂಬ ಸಿದ್ಧಾಂತವನ್ನು ಸ್ವಾಮೀಜಿಯವರು ಶ್ರೀ ಮದ್ ಭಗವದ್ಗೀತೆಯ ಮೂಲಕ ವಿಶ್ವಕ್ಕೆ ತಿಳಿಸಿದರು.

ಧಾರಾಳ ಶಿಷ್ಯವೃಂದ ಅವರಿಗಿದೆ. ತಾನೋರ್ವ ಸನ್ಯಾಸಿಯಲ್ಲ ವೇದಾಂತ ಪ್ರಚಾರಕ ನಾಗಿದ್ದೇನೆನ್ನುತ್ತಾರೆ ಅವರು. ಆ ಭೌತಿಕ ಶರೀರ ಅಸ್ತಂಗತವಾಯಿತು. ಇನ್ನು ಉಳಿದಿರುವುದು ಸಂಕಲ್ಪ ರೂಪ ಮಾತ್ರವಾಗಿದೆ.

---

# ನೇಮಕ್ಕಿಂತ ಪ್ರೇಮ ಮುಖ್ಯ

-ಎಂ. ಮಾಧವ ಪೈ, "ಶ್ರೀನಿವಾಸ" DVS ಹೈಸ್ಕೂಲ್, ಪಕ್ಕ ವಿನೋಬ ನಗರ,
ಶಿವಮೊಗ್ಗ-41

ಇಂದು ನಮ್ಮ ದೇಶದಲ್ಲಿ ಸರ್ವತ್ರ ಭಾವೈಕ್ಯಕ್ಯೋಸ್ಕರ ಆಂದೋಲನ ಡೆಯುತ್ತಿರುವುದು ಸರ್ವವಿದಿತ. ಪ್ರತಿ ವರ್ಷ ಎಲ್ಲರೂ ಭಾವೈಕ್ಯದಿಂದಿರಬೇಕೆಂದು ್ರತಿಜ್ಞೆ ತೆಗೆದುಕೊಳ್ಳುವ ಕ್ರಮವೂ ಜಾರಿಯಲ್ಲಿದೆ. ಸ್ವಾತಂತ್ರ್ಯ ಮತ್ತು ಭಾವೈಕ್ಯದ ಕ್ಷಣೆಗಾಗಿ ಸಮರ್ಪಣ ಮನೋಭಾವದಿಂದ ಶ್ರಮಿಸುವ, ಹಿಂಸಾಮಾರ್ಗಗಳನ್ನು ನುಸರಿಸದೆ, ಜಾತಿ, ಮತ, ಭಾಷೆ. ಪ್ರದೇಶಗಳ ಭೇದಗಳನ್ನೆಣಿಸದೆ ಎಲ್ಲ ವಿವಾದಗಳ ಾಂತಿಯುತ ಇತ್ಯರ್ಥಕ್ಕಾಗಿ ಸಂವಿಧಾನಕ್ಕೆ ಸಮ್ಮತವಾದ ಮಾರ್ಗವನ್ನು ಅನುಸರಿ- ುವುದು ಎಂಬುದು ಭಾವೈಕ್ಯ ಪ್ರತಿಜ್ಞೆಯ ಸಾರ. ಇದರಿಂದ ಪರಸ್ಪರ ವಿಶ್ವಾಸದಿಂದ ಬ್ಬರಿಗೊಬ್ಬರು ಅರಿತುಕೊಂಡು, ಅವರ ಭಾವನೆ ಏಕರೂಪದ್ದಾಗಿರಬೇಕು ಎಂಬುದು ಾವೈಕ್ಯ ಆಂದೋಲನದ ಉದ್ದೇಶ ಎಂಬುದು ಸ್ಪಷ್ಟವಾಗುತ್ತದೆ. ನಮ್ಮ-ನಿಮ್ಮ ವನೆ ಬೇರೆ ಬೇರೆಯಾಗಿರದೆ ಪರಸ್ಪರ ಒಂದೇ ಆಗಿರಬೇಕು ಎಂಬುದಿದರ ಅಂತರಾರ್ಥ. ದಕ್ಕಾಗಿ ನಾವು ಎಷ್ಟೋ ಸಭೆ-ಸಮಾರಂಭಗಳನ್ನು ನಡೆಸುತ್ತೇವೆ. ಉದ್ದುದ್ದ ಾಷಣಗಳನ್ನು ಬಿಗಿಯುತ್ತೇವೆ. ಭಿತ್ತಿಪತ್ರಗಳನ್ನು ಎಲ್ಲೆಲ್ಲೂ ಪ್ರದರ್ಶಿಸುತ್ತೇವೆ. ಾತೆತ್ತಿದರೆ ಭಾವೈಕ್ಯ ಸದ್ಭಾವನೆ ಇರಬೇಕು ಎಂದು ಬೋಧನೆ ನೀಡುತ್ತೇವೆ. ಹಸ್ರಾರು ರೂಪಾಯಿಗಳನ್ನು ಇದಕ್ಕಾಗಿ ವೆಚ್ಚಮಾಡುತ್ತೇವೆ. ಇಷ್ಟೆಲ್ಲ ಮಾಡಿ ಾವೈಕ್ಯತೆಗಾಗಿ ಏನೋ ಸಾಧಿಸಿದ್ದೇವೆಂದುಕೊಳ್ಳುತ್ತೇವೆ. ಆದರೆ ಲೋಕ ಮಾತ್ರ ನ್ನ ಎಂದಿನ ವ್ಯವಹಾರ ದೃಷ್ಟಿಯಲ್ಲೇ ಸಾಗುತ್ತದೆ. ಸ್ವಲಾಭಕ್ಕೆ ಅಡ್ಡಿ ಬಂದರೆ ೋಧಿಸಿದವರೇ ಬಾಧಕರಾಗುತ್ತಾರೆ. ಹೀಗಾದರೆ ಭಾವೈಕ್ಯತೆ ಹೇಗೆ ಸಾಧ್ಯ? ನರಲ್ಲಿ ಸದ್ಭಾವನೆ ಮೂಡುವುದೆಂತು? ಇದು ಬರಿಯ ಭಾಷಣದಿಂದ, ಬೋಧನೆಯಿಂದ ಥವಾ ಸಹಸ್ರಾರು ರೂಪಾಯಿ ವೆಚ್ಚಮಾಡುವುದರಿಂದಲೇ ಆಗುವ ಕಾರ್ಯವಲ್ಲ. ನತೆಯಲ್ಲಿ ಇದರ ಬಗ್ಗೆ ಪರಸ್ಪರ ನಾವೆಲ್ಲ ಒಂದು, ಒಂದು ದೇಶಕ್ಕೆ ಸೇರಿದವರು ಒಂದು ಸ್ಕೃತಿಯ ನೆಳಲ್ಲಿ ಬಾಳುವವರು ಎಂಬ ಅರಿವು ಮೂಡಿದರೆ ಮಾತ್ರ ಭಾವನೆ ಂದೇಯಾಗಲು ಸಾಧ್ಯ. ಈ ಪರಸ್ಪರ ಅರಿವಿನ ಮಿಲನವಾಗಲು ಪರಸ್ಪರ ಆತ್ಮೀಯತೆ ಬೇಕಾದುದು ಅತ್ಯಾವಶ್ಯಕ. ಪರಸ್ಪರ ಆತ್ಮೀಯತೆ ಇಲ್ಲದಿದ್ದರೆ ಪರಸ್ಪರ ಐಕಮತ್ಯ ುವುದಿಲ್ಲ. ಆದುದರಿಂದ ಅಥರ್ವಣವೇದ ಹೇಳುತ್ತದೆ:

ಸಂವೋಮನಾಂಸಿ ಸಂವ್ರತಾ । ಸಮಾಕೂತೀರ್ನಮಾಮಸಿ ।
ಅಮೀ ಯೇವಿವ್ರತಾಸ್ಥನಃ ತಾನ್ವಃ ಸಂ ನಮಯಾಮಸಿ ॥

ನಿಮ್ಮೆಲ್ಲರ ಮನಸ್ಸು ಒಳ್ಳೆಯದಾಗಿ ಏಕರೀತಿಯಲ್ಲಿರಲಿ, ನಿಮ್ಮ ಸಂಕಲ್ಪಗಳು ್ಳೆಯದಾಗಿರಲಿ; ನಾವು ವಿನೀತರಾಗಿ ನಡೆಯುತ್ತೇವೆ. ನಿಮ್ಮ ನಡುವೆ ಯಾವ

ಈ ಜನರು ವಿರುದ್ಧ ಸಂಕಲ್ಪವುಳ್ಳವರಾಗಿರುತ್ತಾರೊ ಅವರನ್ನು ನಾವು ಒಳ್ಳೆಯ ರೀತಿಯಲ್ಲಿ ವಿನೀತರನ್ನಾಗಿ ಮಾಡುತ್ತೇವೆ-ಎಂದು ಹೇಳುವ ಈ ಮಂತ್ರದಲ್ಲಿ ಇರುವ 'ನಿಮ್ಮ ನಡುವೆ ಯಾರು ಈ ಜನರು ವಿರುದ್ಧ ಸಂಕಲ್ಪವುಳ್ಳವರಾಗಿರುತ್ತಾರೊ ಅವರನ್ನು ಒಳ್ಳೆಯ ರೀತಿಯಲ್ಲಿ ವಿನೀತರನ್ನಾಗಿ ಮಾಡುತ್ತೇವೆ 'ಎಂಬ ಉಕ್ತಿ ಭಾವೈಕ್ಯತೆಯ ಸೂತ್ರ ಎಂದರೆ ತಪ್ಪಾಗಲಾರದು. ನಮ್ಮ ಸಂಕಲ್ಪಕ್ಕೆ ವಿರುದ್ಧವಾಗಿ ಇರುವವರನ್ನು ಒಳ್ಳೆಯ ರೀತಿಯಲ್ಲಿ ನಮ್ಮ ಸಂಕಲ್ಪಕ್ಕೆ ಸರಿಯಾಗಿ ಭಾವನೆ ಹೊಂದುವವರಾಗಬೇಕಾದರೆ ನಾವು ವಿನೀತರಾಗಿ ನಡೆಯಬೇಕಾದುದು ಅತ್ಯವಶ್ಯಕ ಎಂಬುದನ್ನು' ನಾವು ವಿನೀತರಾಗಿ ನಡೆಯುತ್ತೇವೆ ಎಂದು ಈ ಮಂತ್ರದಲ್ಲಿರುವುದನ್ನು ಮರೆಯಬಾರದು. ನಾವು ವಿನೀತರಾಗಿ ನಡೆದರೆ ನಮ್ಮ ವಿರೋಧಿಗಳೂ ವಿನಯದಿಂದ ನಡೆಯುತ್ತಾರೆ. 'ವಿನಯೇನ ವಿನಾಶಾ ಶ್ರೀ' ಎಂಬುಕ್ತಿಯೇ ಇದೆ ಆದರಿಂದ ಆತ್ಮೀಯತೆ ವರ್ಧಿಸುತ್ತದೆ. ಈ ಆತ್ಮೀಯತೆ ವರ್ಧಿಸಬೇಕಾದರೆ, ಅಲ್ಲಿ ಪರಸ್ಪರ ಒಬ್ಬರು ಇನ್ನೊಬ್ಬರನ್ನು ಪ್ರೀತಿಸಿದರೆ ಮಾತ್ರ ಸಾಧ್ಯ. ನಾವು ಯಾರಿಗಾದರೂ ಪತ್ರ ಬರೆಯುವ ಸಂದರ್ಭ ಬಂತೆಂದಾದರೆ, ನಾವು ಆ ಪತ್ರದಲ್ಲಿ ಪ್ರಥಮತಃ ಪ್ರಿಯರೇ, ಆತ್ಮೀಯರೆ, ಮಿತ್ರರೇ ಇತ್ಯಾದಿ ಶಬ್ದ ಪ್ರಯೋಗಿಸಿ ಸಂಬೋಧಿಸುತ್ತೇವೆಯಲ್ಲವೆ! ಇದರ ಉದ್ದೇಶವೇನೆಂಬುದನ್ನು ಆಲೋಚಿಸಿದರೆ, ನಾನು ಬರೆದ ಪತ್ರವನ್ನ ಓದಿದವರಿಗೆ ನನ್ನ ಮನಸ್ಸಿನ ಭಾವನೆ ಅವರ ಮನದ ಭಾವನೆಯೊಂದಿಗೆ ಕೂಡಿ ಬರಬೇಕು ಎಂಬ ಉದ್ದೇಶ ಅಲ್ಲಿದೆ ಎಂಬುದು ಮನವರಿಕೆಯಾಗುತ್ತದೆ. ಆದಕ್ಕಾಗಿ ಮೊದಲಿಗೆ ವಿನಯಭರಿತ ಪ್ರೀತಿಯಿಂದ ಸಂಬೋಧಿಸುತ್ತೇವೆ. ಅಂದಮೇಲೆ ಸಂಬೋಧನೆಯ ಶಬ್ದದಲ್ಲಿಯೇ ಭಾವೈಕ್ಯತೆಯ ಮೂಲ ಮಂತ್ರ ಪ್ರೀತಿಸುವುದು ಎಂಬುದಾಗಿದೆಯೆಂಬುದು ಸ್ಪಷ್ಟ. ಆದರೆ ಬಹುತೇಕ ಜನರು ಬರೆ ಬಾಯಿ ಮಾತಿನ ಪ್ರೀತಿ ತೋರಿಸುತ್ತಾರೆಯೇ ಹೊರತು ಹೃದಯಾಂತರಾಳದಿಂದ ಆ ಪ್ರೀತಿ ವ್ಯಕ್ತಗೊಳಿಸುವುದಿಲ್ಲ. ಈ ರೀತಿ ಇರುವೆಡೆ ಭಾವೈಕ್ಯ ಉಂಟಾಗಲು ಸಾಧ್ಯವಿಲ್ಲ.

ಸಾಮಾನ್ಯವಾಗಿ ಪ್ರೀತಿಯು ಸ್ವಾರ್ಥಪರತೆಯೊಡನೆ ಮಿಳಿತವಾಗಿರುತ್ತದೆ. ಏನನ್ನೋ ನಾವು ಬಯಸಿದಾಗ, ಅದು ಯಾರಿಂದ ಪ್ರಾಪ್ತವಾಗಬಹುದೋ ಅಂತಹವರನ್ನು 'ನಾನು ನಿನ್ನನ್ನು ಪ್ರೀತಿಸುತ್ತೇನೆ ಎಂದು ಹೇಳುತ್ತೇವೆ. ಅಂದರೆ ನಮಗೆ ಏನೋಬೇಕು, ಹಾಗಾಗಿ ನಾವು ನಿಮ್ಮನ್ನು ಪ್ರೀತಿಸುತ್ತೇವೆ, ನೀವೂ ನಮ್ಮನ್ನು ಪ್ರೀತಿಸುತ್ತೀರಿ ಎಂಬುದು ಸರಿಯಲ್ಲ. ನಿಷ್ಕಾಮ ನಿಸ್ವಾರ್ಥಕಾರ್ಯವನ್ನು ಮಾಡುವುದಾದರೆ ಆದು ನಿಜಕ್ಕೂ ಪ್ರೀತಿಯೆನಿಸಿಕೊಳ್ಳುವುದು.

ಪೋಥಿ ಪಢಪಢಕೆ ಜಗಮುವಾ ಪಂಡಿತ ಭಯಾನಕೋಈ।
ಢಾಈ ಅಕರ ಪ್ರೇಮಕಾ ಪಢೆಸೋ ಪಂಡಿತ ಹೋಈ॥-

ಉದ್ಗ್ರಂಥಗಳನ್ನು ಓದಿ ಓದಿ ಆಯುಷ್ಯ ಕಳೆಯಿತು, ಆದರೆ ಯಾರೂ
ತರಾಗಲಿಲ್ಲ. ಆದೇ ಪ್ರೇಮ ಎಂಬ ಎರಡೂವರೆ ಅಕ್ಷರ ಓದಿದವನು
ಪಂಡಿತನಾದ-ಮಹಾತ್ಮ ಕಬೀರದಾಸರ ಈ ವಾಣಿಯಲ್ಲಿ ಜ್ಞಾನಿ, ಪಂಡಿತ
ಕೊಳ್ಳಬೇಕಾದರೆ ಲೋಕವನ್ನು ಪ್ರೀತಿಸುವ ಭಾವನೆ ಬೆಳೆಸಿಕೊಂಡವನಿಗೆಮಾತ್ರ
; ಅಂದರೆ ಬರಿಯ ಉದ್ಗ್ರಂಥಗಳನ್ನು ಪಠಣ ಮಾಡಿ ಅರಗಿಸಿಕೊಳ್ಳುವುದು
ತ್ಯವಲ್ಲ, ಆ ಗ್ರಂಥಗಳಲ್ಲಿ ಪ್ರತಿಪಾದಿತವಾದ ಸಕಲರನ್ನು ಪ್ರೇಮಿಸುವ
ವನ್ನು ಅರಗಿಸಿಕೊಂಡು ಅದನ್ನು ಅನುಷ್ಠಾನಕ್ಕೆ ತಂದಲ್ಲಿ ಮಾತ್ರ ಓದಿದವನು
ಯಾಗಬಲ್ಲನೇ ಹೊರತು ಬರಿಯ ಪಠಣದಿಂದ ಯಾರೂ ಜ್ಞಾನಿಯಾಗಲಾರರು
ಹೇಳುವ ಮಾತು ಚಿಂತನೀಯವಾಗಿದೆ. ಇದನ್ನೇ ಇನ್ನೊಂದು ಮಾತಿ
ಸಿದ್ಧರಾಮನ ನುಡಿಯಲ್ಲಿ ಹೇಳುವುದಾದರೆ "ಭೂತಂಗಳೊಳನುಕಂಪೆ, ಸಕಳ
ಣಿಗಳ ಲೇಸ ಬಯಸುವುದು." ಇದು ಪ್ರೇಮಭಾವನೆಯಿದ್ದರೆ ಮಾತ್ರ

ದ ಎಲ್ಲ ಮಹಾತ್ಮರೂ, ಸಾಧುಗಳೂ, ದಾರ್ಶನಿಕರೂ, ಶರಣರೂ, ದಾಸರೂ
ಕಂಡ ದರ್ಶನವನ್ನು ಲೋಕಕ್ಕೆ ಬೋಧಿಸುವಾಗ ಸಕಲ ಜೀವಜಂತುಗಳನ್ನು
ಬೇಕು, ಪ್ರೇಮಿಸಬೇಕು, ಎಲ್ಲವುಗಳಮೇಲೆ ವಾತ್ಸಲ್ಯಭಾವ ತೋರಿಸಬೇಕೆಂದು
ರೆ ಸಾಮಾನ್ಯವಾಗಿ ಲೋಕದವರು ತನ್ನವರು ಎಂದಿರುವವರನ್ನು ಮಾತ್ರ
ತ್ತಾರೆ. ಅದೂ ಕೂಡ 'ಸ್ವಾರ್ಥಕ್ಕೆಲ್ಲರೂ ನೆಂಬರು' ಎಂಬಂತೆ ತಮ್ಮ
ನೆರವೇರುವುದಾದರೆ ಮಾತ್ರ "ನವಾ ಅರೇ ಸರ್ವಸ್ಯ ಕಾಮಾಯ ಸರ್ವಂ
ಭವತಿ, ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ"-ಎಲ್ಲದರ
ಜನಕ್ಕಾಗಿ ಎಲ್ಲವೂ ಪ್ರಿಯವಾಗಿರುವುದಿಲ್ಲ. ತನ್ನ ಪ್ರಯೋಜನಕ್ಕಾಗಿ ಎಲ್ಲವೂ
ಗಿರುತ್ತದೆ-ಎಂದು ಉಪನಿಷತ್ತಿನಲ್ಲಿ ಯಾಜ್ಞವಲ್ಕ್ಯನು ಮೈತ್ರೇಯಿಗೆ
ದೆ. ಅಂದರೆ ಪತಿಯ ಪ್ರಯೋಜನಕ್ಕಾಗಿ ಪತಿಯು (ಪತ್ನಿಗೆ) ಪ್ರಿಯ
ವುದಿಲ್ಲ, ತನ್ನ (ಎಂದರೆ ಪತ್ನಿಯ) ಪ್ರಯೋಜನಕ್ಕಾಗಿ ಪತಿಯು ಪ್ರಿಯ
ತ್ತಾನೆ. ಪತ್ನಿಯ ಪ್ರಯೋಜನಕ್ಕಾಗಿ ಪತ್ನಿಯು ಪ್ರಿಯಳಾಗಿರುವುದಿಲ್ಲ.
ಪತಿಯ) ಪ್ರಯೋಜನಕ್ಕಾಗಿ ಪತ್ನಿಯು ಪ್ರಿಯಳಾಗಿರುತ್ತಾಳೆ. ಮಕ್ಕಳ
ಜನಕ್ಕಾಗಿ ಮಕ್ಕಳು (ತಾಯಿ-ತಂದೆಯರಿಗೆ ಪ್ರಿಯರಾಗಿರುವುದಿಲ್ಲ,) ತನ್ನ
ಯಿಯರ) ಪ್ರಯೋಜನಕ್ಕಾಗಿ ಮಕ್ಕಳು ಪ್ರಿಯರಾಗಿರುತ್ತಾರೆ. ಇದೇ
, ಪಶು, ಬ್ರಾಹ್ಮಣ, ಕ್ಷತ್ರಿಯ, ಲೋಕ, ದೇವತೆ, ವೇದ, ಪ್ರಾಣಿಗಳೆಲ್ಲವೂ
ಜನಗಾಗಿ ಒಬ್ಬರು ಇನ್ನೊಬ್ಬರನ್ನು ಪ್ರೀತಿಸುತ್ತಾರೆಯೋ ಹೊರತು ಇನ್ನೊಬ್ಬರಿ
ರೂ ಪ್ರೀತಿ ಮಾಡುವುದಿಲ್ಲ. ಇವರ ಪ್ರೀತಿಯಲ್ಲಿ ತಮ್ಮ ಹಿತ ಚಿಂತನೆಯ
ದೆ. ತಮ್ಮ ಸ್ವಾರ್ಥಕ್ಕೇನಾದರೂ ಕುಂದು ಬರುತ್ತದೆಯೆಂದಾದರೆ ಅಲ್ಲಿ
ತಿ ಬತ್ತಿಹೋಗುತ್ತದೆ. ಅಂತಹ ಪ್ರೀತಿ ನೈಜ ಪ್ರೀತಿಯೆನಿಸುವುದಿಲ್ಲ.

ಲೋಕದಲ್ಲಿ ಅಧಿಕಾಂಶ ಜನರು ನೊಣ, ಕಾಗೆ, ಗೂಬೆ, ಬಕ ಹಾಗೂ ಕಪ್ಪೆಯ ಹಾಗೆ-ಕಾರಣವಿಲ್ಲದೇನೆ ಹಾನಿ ಮಾಡುವ, ಪರನಿಂದಾರೂಪೀ ಮಲವನ್ನು ಭಕ್ಷಿಸುವ, ಭಗವಂತನ ಕಡೆಯಿಂದ ಕಣ್ಣು ಮುಚ್ಚಿಕೊಂಡಿರುವ ಬಾಹ್ಯದಲ್ಲಿ ಸುಂದರ ವೇಷ ಧರಿಸಿಕೊಂಡು ಅಂತರ್ಯದಲ್ಲಿ ವಂಚಿಸುವ ಇಚ್ಛೆ ಇಟ್ಟುಕೊಂಡಿರುವ, ಮತ್ತು ವ್ಯರ್ಥ ಚರ್ಚೆ ಮಾಡುವವರಾಗಿರುತ್ತಾರೆ. ಇನ್ನುಳಿದ ಉತ್ತಮರಾಗಿದ್ದ ಕೆಲವರು ಗಿಳಿ, ಕೋಗಿಲೆ ಮತ್ತು ನವಿಲಿನ ಹಾಗೆ-ನೋಡಲು ಒಳ್ಳೆಯವರು, ಆದರೆ ಕ್ಷಣ ಮಾತ್ರ ದಲ್ಲಿ ಪ್ರೇಮವನ್ನು ಮುರಿದು ಓಡುವವರು, ನುಡಿಯುವುದರಲ್ಲಿ ಮಧುರರು ಆದರೆ ಸ್ವಾರ್ಥಿಗಳು ಮತ್ತು ಶರೀರದಿಂದ ಸುಂದರರು ಆದರೆ ಕಠೋರ ಹೃದಯಿಗಳಾಗಿರು ತ್ತಾರೆ. ಪ್ರೇಮಮಾರ್ಗದಲ್ಲಿ ನಡೆಯಲು ಯೋಗ್ಯರಾದವರು ಯಾರೂ ಇಲ್ಲ.

ಮಾಖೀ ಕಾಕ ಉಲೂಕ ಬಕ ದಾದುರಸೇ ಭಏ ಲೋಗೆ।
ಭಲೇ ತೇ ಸುಕ ಪಿಕ ಮೋರಸೇ ಕೋಊ ನ ಪ್ರೇಮ ಪಥ ಜೋಗೆ॥

ಎಂಬುದು ತುಲಸೀದಾಸರ ಹೇಳಿಕೆ. ಸ್ವಾರ್ಥಕ್ಕಾಗಿ ಪ್ರೀತಿಸುವುದು ಶುದ್ಧ ಸಾತ್ವಿಕ ಪ್ರೀತಿಯಾಗುವುದಿಲ್ಲ. ಏಕೆಂದರೆ ನಮ್ಮ ಸ್ವಾರ್ಥಕ್ಕೆ ಅಡ್ಡಿ ಬಂದಲ್ಲಿ ದ್ವೇಷ ಭಾವ ಉಂಟಾಗುತ್ತದೆ. ಈ ದ್ವೇಷದ ಬೆಳವಣಿಗೆ ಹಿಂಸೆಯಲ್ಲಿ ಪರಿವರ್ತನೆ ಹೊಂದುತ್ತದೆ. ಇದರಿಂದ ಭಾವೈಕ್ಯವಾಗುವ ಬದಲು ಭಾವಭಿನ್ನತೆಯುಂಟಾಗಿ ಎಲ್ಲೆಲ್ಲೂ ಸಮರ ಪ್ರಾರಂಭವಾಗಲು ಅವಕಾಶವಾಗುತ್ತದೆ. ಆದ್ದರಿಂದ ಸ್ವಾರ್ಥಕ್ಕಾಗಿ ಪ್ರೀತಿಸುವುದು ತರವಲ್ಲ. ಅದು ಶುದ್ಧ ಮೋಸ. ಅದರ ಬದಲು ಯಾವುದರಿಂದ ತನಗೇನು ಲಾಭವಿಲ್ಲವೆಂದು ಕಂಡುಬಂದರೂ, ಅಷ್ಟೇ ಏಕೆ ತನ್ನ ಶತೃ ಎಂದೆನಿಸಿಕೊಂಡವನನ್ನು ಪ್ರೀತಿಸುವ ಗುಣ ಯಾರಲ್ಲಿ ಇರುತ್ತದೋ ಅಂತಹ ವನು ದೇವತಾ ಪುರುಷನೆನಿಸಿಕೊಳ್ಳುತ್ತಾನೆ. ಒಮ್ಮೆಯಾದರೂ ನಮಗೆ ಕೇಡು ಬಯಸಿದರೂ ಅದಕ್ಕೆ ಪ್ರತಿಯಾಗಿ ಅಂತಹವನಿಗೆ ಕೇಡು ಬಯಸದೆ ಒಳಿತನ್ನೇ ಬಯಸಬೇಕು. "ತನ್ನವರನ್ನು ಪ್ರೀತಿಸುವುದು ವಿಶೇಷತೆಯಲ್ಲ! ವೈರಿಗಳನ್ನು ಪ್ರೀತಿಸುವುದನ್ನು ಕಲಿಯಬೇಕು" ಎಂದು ಮಹಾತ್ಮ ಯೇಸುವೂ ಹೇಳಿದ್ದುಂಟು. ಇದೇ ಮನುಷ್ಯತ್ವದ ಲಕ್ಷಣ ಎಂಬುದನ್ನು-"ನಿನ್ನ ದಾರಿಯಲ್ಲಿ ಯಾರಾದರೂ ಮುಳ್ಳನ್ನು ಬಿತ್ತಿ (ಚೆಲ್ಲಿ) ದರೆ, ನೀನವರ ದಾರಿಯಲ್ಲಿ ಹೂಗಳನ್ನು ಬಿತ್ತು (ಚೆಲ್ಲು) ಆದರಿಂದ ಮುಳ್ಳು ಬಿತ್ತಿದವನಿಗೆ ಮುಳ್ಳು, ಹೂಗಳನ್ನು ಬಿತ್ತಿದ ವನಿಗೆ ಹೂಗಳೂ ಪ್ರಾಪ್ತವಾಗುವುದೆಂದು ಸೂಚಿಸಿ ಕಬೀರರು ಪರರ ಒಳಿತನ್ನು ಬಯಸುವುದರಿಂದ ದೊರಕುವ ಲಾಭವನ್ನು ಅರ್ಥಗರ್ಭಿತವಾಗಿ ವರ್ಣಿಸಿ, ಕೇಡುಗ ನನ್ನು ಪ್ರೇಮಿಸಬೇಕೆಂದು ಮನಗಾಣಿಸಿದ್ದಾರೆ. ಒಳಿತನ್ನ ಬಗೆದವರ ಬಗ್ಗೆ ಒಳಿತನ್ನು ಹಾರೈಸುವುದು ಕರ್ತವ್ಯ; ಕೆಡುಕನ್ನು ಬಗೆದವರ ಬಗ್ಗೆಯೂ ಒಳಿತನ್ನು

ಹಾರೈಸುವುದು ಧರ್ಮ. ಹೀಗೆ ಎಲ್ಲಿ ಪ್ರೀತಿ, ಪ್ರೇಮ, ಸ್ನೇಹಗಳು ಆತ್ಮೀಯವೂ ನಿಸ್ವಾರ್ಥ ಭರಿತವೂ ಆಗಿರುತ್ತದೋ ಅಲ್ಲಿ ದುಷ್ಟನೂ, ಶಿಷ್ಟನೂ, ಗರ್ವಿಯೂ, ವಿನಯಿಯೂ ಎಲ್ಲರೂ ಸಹಾಯಕ್ಕಾಗಿ ಒದಗಿ ಬರುತ್ತಾರೆ. "ಜನ ಪ್ರೀತ್ಯಾವಶೀ ಭವತಿ ನಶಕ್ತ್ಯಾ" ಜನರು ಪ್ರೀತಿಯಿಂದ ವಶರಾಗುತ್ತಾರೆಯೇ ಹೊರತು ಶಕ್ತಿಯಿಂದಲ್ಲ, ಕಾರಣವೇನೆಂದರೆ ಪ್ರೇಮ, ಪ್ರೀತಿಯೆಂಬುದು ಶುದ್ಧ ಸಾತ್ವಿಕ ಭಾವನೆಯಾಗಿದ್ದು ಇದರಲ್ಲಿಯೇ ಮಾನವತೆಯ ಬೀಜ ಹುದುಗಿಕೊಂಡಿದೆ ಹೀಗಾಗಿ 'ಪ್ರೀತಿಯೆಂಬುದು ಪರಸ್ಪರ ಬೆಸೆಯುವ ಸೂತ್ರವಾಗಿದೆ. ಆ ಸೂತ್ರ ತುಂಡಾಗದಂತೆ ನೋಡಬೇಕು.'' ಎಂಬುದು ರಹೀಮ್ ಎಂಬ ಕವಿಯ ಉಪದೇಶ, ತೊಂಡರಿಗೆ ತೊಂಡನಾಗಿರುವವನು ಪಾಂಡವರ ಮನೆಯಲ್ಲಿ ಕುದುರೆಗಳ ತಾ ತೊಳೆದು ಹುಲ್ಲ ತಂದಿತ್ತ ಆ ಲಕ್ಷ್ಮೀರಮಣನಿಗೆ ಒಂದಿಷ್ಟೂ ಗರ್ವವಿಲ್ಲ. ಆತ ಹೂವನ್ನು ತಂದವರ ಮನೆಗೆ ಹುಲ್ಲನ್ನು ತಂದು ಹಾಕುವ ಚಾಕರಿಗೂ ಸಿದ್ಧನಾಗಿದ್ದಾನೆ. 'ಹೂವ ತರುವವರ ಮನೆಗೆ ಹುಲ್ಲ ತರುವ, ಅವ್ವ ಲಕುಮಿರಮಣ ಅವಗಿಲ್ಲಗರುವ" ಎಂದು ಪುರಂದರದಾಸರು ಹಾಡಿರುವ ನುಡಿ ಇದೇ ಅಂತರಾರ್ಥವನ್ನು ಹೊಂದಿದೆ. ಇಂತಹ ಸಾತ್ವಿಕ ಸುಖದ ಲಾಭ ನೀಡುವ ದಿವ್ಯ ಪ್ರೇಮ ಜಗತ್ತಿಗೆ ಬೇಕಾದುದಾದರೂ ಅದು ಯಾರಿಗೂ ಬೇಡವಾಗಿದೆ.

> ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃಕರುಣಏವಚ ।
> ನಿರ್ಮಮೋ ನಿರಹಂಕಾರಃ ಸಮದುಃಖ ಸುಖಕ್ಷಮೀ ॥

ಚರಾಚರ ಸಕಲ ಪ್ರಾಣಿಗಳ ಮೇಲೆ ದ್ವೇಷ ಭಾವನೆಯಿಲ್ಲದವನೂ, ಸ್ವಾರ್ಥರಹಿತನೂ ಪ್ರೇಮಿಯೂ, ಹೇತುರಹಿತದಯಾಲುವೂ, ಮಮತಾರಹಿತನೂ, ಅಹಂಕಾರರಹಿತನೂ ಸುಖದುಃಖಗಳಲ್ಲಿ ಸಮನಾಗಿರುವವನೂ, ಅಪರಾಧಿಗಳ ವಿಷಯದಲ್ಲೂ ಅಭಯ ನೀಡುವ ಕ್ಷಮಾವಂತನೂ ಆಗಿರುವವನೇ ನನಗೆ ಪ್ರಿಯನಾಗಿರುತ್ತಾನೆ ಎಂದು ಶ್ರೀ ಕೃಷ್ಣನೂ ಗೀತೆಯಲ್ಲಿ ಹೇಳಿದ್ದಿದೆ. ಇದರಲ್ಲಿ 'ಅಪರಾಧಿಗಳಿಗೂ ಅಭಯ, ಕ್ಷಮೆ ನೀಡುವವನೂ' ಎಂದು ಹೇಳಿದುದನ್ನು ಗಮನಿಸಬೇಕು. ನಮ್ಮ ವಿಷಯದಲ್ಲಿ ಕೆಡಕನ್ನುಂಟು ಮಾಡಿ ಅಪರಾಧಿಯಾಗಿರುವವನಿಗೆ ಅಭಯ ನೀಡಬೇಕಾದರೆ ನಮ್ಮ ಮನಸ್ಸು ವಿಶ್ವ ವಿಶಾಲ ಭಾವನೆಯಿಂದ ತುಂಬಿ ತುಳುಕಾಡುತ್ತಿರಬೇಕಾದದು ಅವಶ್ಯ. ಇಂತಹ ವಿಶ್ವವಿಶಾಲ ಪ್ರೇಮಭಾವನೆಯ ಉದಾಹರಣೆಯನ್ನು ನಾವು ಬಸವಣ್ಣನವರ ವ್ಯಕ್ತಿತ್ವದಲ್ಲಿ ಕಾಣಬಹುದು. ಕಳ್ಳರೊಮ್ಮೆ ಅವರ ಹಸುಗಳನ್ನು ಕದ್ದೊಯ್ದಾಗ ''ಆಕಳ ಕಳ್ಳರು ಕೊಂಡೊಯ್ದರೆನ್ನದಿರಿಂ ಭೋ ನಿಮ್ಮ ಧರ್ಮ, ಬೊಬ್ಬಿಡದಿರಿ ಭೋ ನಿಮ್ಮ ಧರ್ಮ, ಆರದಿರಿಂಭೋ ನಿಮ್ಮ ಧರ್ಮ' ಎಂದು ಕರುಗಳಿಲ್ಲದೆ ಆ ಹಸುಗಳು ಎಷ್ಟು ನೊಂದುವೊ ಎಂದು ಕರುಗಳನ್ನು ಬಿಡಿಸಿ ಆ ಹಸುಗಳೊಂದಿಗೆ ಕೂಡುವಂತೆ ಮಾಡಿದರಲ್ಲದೆ, ಕಳ್ಳರನ್ನು ಹಿಡಿ, ಬಡಿ, ಕಡಿ ಎಂದು ಆಜ್ಞೆ ಮಾಡದೆ ಅಭಯ

ನೀಡಿದ ಕರುಣಾಳು ಅವರು. ಇಂತಹ ಉದಾರ ಭಾವನೆಯು ಅವರ ಅಂತಃಕರಣದ ಪ್ರೇಮದ ಹೊನಲು ಹರಿದುದರ ಪರಿಣಾಮವೇ ಅವರು ಕೂಡಲಸಂಗನ ಪ್ರಿಯಭಕ್ತರಾದರೆಂಬುದನ್ನು ಮರೆಯಬಾರದು.

ಎಷ್ಟೋ ಸಲ ನಾವು ನಮ್ಮನ್ನು ಸಂದರ್ಶಿಸಬಂದವರನ್ನು ಸ್ವಾಗತಿಸುವಾಗ ಅವರ ಕೈ ಕುಲುಕುತ್ತೇವೆ. ಆದರೆ ಕೈಕುಲುಕುವಲ್ಲಿ ಮನವೂ ಕುಲುಕುವಂತಾದರೆ ಮಾತ್ರ ಅದು ಸಾರ್ಥಕ. ಕೆಲವೊಮ್ಮೆ ನಾವು ಇನ್ನೊಬ್ಬರನ್ನು ಮೈಮುಟ್ಟಿ, ಬೆನ್ನು ತಟ್ಟಿ ಬಹಳ ಆತ್ಮೀಯರೆಂದು ತೋರಿಸಿಕೊಳ್ಳುವುದಿದೆ. ಕೈಕುಲುಕಿದಾಗ ಅಥವಾ ಮೈಮುಟ್ಟಿ ಬೆನ್ನುತಟ್ಟಿದಾಗ ಆ ಕೈಯ ಮೂಲಕ ಮನದ ಪ್ರೀತಿ ಹೊರಹೊಮ್ಮಿದರೆ ಮಾತ್ರ ಮನಕುಲುಕುವಂತಾದೀತು, ಸೋಡಾ ಬಾಟಲಿಯನ್ನು ಕುಲುಕಿ ತೆರೆದಾಗ ಒಳಗಿದ್ದುದು ಹೇಗೆ ಹೊರಗೆ ಉಕ್ಕಿ ಬರುತ್ತದೊ ಹಾಗೆ ಕೈಕುಲುಕಿದಾಕ್ಷಣ ಮನದ ಪ್ರೀತಿ ಹೊರಗೆ ಉಕ್ಕಿ ಬರಬೇಕು. ಇಲ್ಲವಾದರೆ ಅದು ಶಿಷ್ಟಾಚಾರದ ಒಂದು ಬರಿಯ ನಾಟಕವಾದೀತು. ಬಾಯಲ್ಲಿ ರಾಮನಾಮ, ಕಂಕುಳಲ್ಲಿ ದೊಣ್ಣೆ ಎಂಬ ಗಾದೆಗೆ ಅವಕಾಶವಾಗಬಾರದು. ಆದ್ದರಿಂದ ತನು ಮುಟ್ಟುವುದು ಮುಖ್ಯವಲ್ಲ, ಮನ ಮುಟ್ಟುವುದು ಮುಖ್ಯ ನೇಮಕ್ಕಿಂತ ಪ್ರೇಮ ಮುಖ್ಯವಲ್ಲವೆ.

ಹಲವುಸಲ ನಮಗೆ ಇಷ್ಟ ಇಲ್ಲದಿದ್ದರೂ ಬೇರೆಯವರಿಗೋಸ್ಕರ ಕಠಿಣಕಾರ್ಯವಾದರೂ ಮಾಡಲು ನಾವು ಮುಂದುವರಿಯುತ್ತೇವೆಯಲ್ಲವೆ? ಇದನ್ನು ನಾವು 'ದಾಕ್ಷಿಣ್ಯಕ್ಕೆ ಕಟ್ಟುಬಿದ್ದು ಮಾಡಬೇಕಾಯಿತು' ಎಂದು ಹೇಳುವುದಿದೆ. ಈ ದಾಕ್ಷಿಣ್ಯಕ್ಕೆ ಕಟ್ಟುಬೀಳಲು ಕಾರಣವೇನೆಂದು ಆಲೋಚಿಸಿದರೆ ಅದರಲ್ಲಿ ಪ್ರೀತಿ ಸ್ನೇಹ ಇರುವುದು ಕಾರಣ ಎಂಬುದನ್ನು ತಿಳಿದುಕೊಳ್ಳಬೇಕು. ಇದರಿಂದ ಒಂದು ರೀತಿಯ ಆನಂದವನ್ನ ನಾವು ಅನುಭವಿಸುತ್ತೇವೆಯೇ ಹೊರತು ವ್ಯಥೆ ಪಡುವುದಿಲ್ಲ ಅಲ್ಲವೆ! ಎಂದಾಗ ಪ್ರೀತಿಯ, ಸ್ನೇಹದ ಮಹತ್ವ ಎಷ್ಟು ಅಮೂಲ್ಯವಾದ ವಿಷಯವೆಂಬುದು ಮನವರಿಕೆಯಾಗುತ್ತದೆ.

ಪ್ರೀತಿ, ಸ್ನೇಹ ಎಂಬುದಿದು ಒಂದು ಆಕರ್ಷಣೆ. ಅದು ಪರಸ್ಪರ ಒಬ್ಬರೊಬ್ಬರನ್ನು ಹತ್ತಿರಕ್ಕೆ ತರುತ್ತದೆ, ಹೀಗೆ ಪರಸ್ಪರ ಅನ್ಯೋನ್ಯತೆಯನ್ನುಂಟು ಮಾಡುವ ಇದು ಪೂಜ್ಯರಿಗೆ, ಗುರುಹಿರಿಯರಿಗೆ ದೇವರಿಗೆ ಸಂಬಂಧಪಟ್ಟುದ್ದಾದರೆ ಅದನ್ನು ಭಕ್ತಿಯೆಂದೂ, ಸಮಾನರಿಗೆ ಸಂಬಂಧಿಸಿದುದಾದರೆ ಪ್ರೀತಿ, ಸ್ನೇಹ, ಪ್ರೇಮ ಎಂದೂ, ಕಿರಿಯರಿಗೆ ಸಂಬಧಿಸಿದುದಾದರೆ ವಾತ್ಸಲ್ಯವೆಂದು ಹೇಳುತ್ತಾರೆ. ಹೀಗೆ ಪ್ರೀತಿ, ಪ್ರೇಮ, ಭಕ್ತಿ. ವಾತ್ಸಲ್ಯ

ವೆಂಬುದೆಲ್ಲವೂ ಒಂದೇ ಪ್ರೀತಿಯಲ್ಲಿ ಉತ್ತಮರ, ಮಧ್ಯಮರ ಮತ್ತು ನೀಚರ ದೆಂಬುದಿದ್ದು ಇದು ಕ್ರಮವಾಗಿ ಕಲ್ಲು, ಮರಳು ಮತ್ತು ನೀರಿನ ಸಮಾನವಾಗಿದೆ. ಉತ್ತಮನ ಪ್ರೀತಿ ಶಿಲಾಲೇಖದಂತೆ ಅಚಲ, ಮಧ್ಯಮನದು ಮರಳಿನ ಮೇಲೆ ಬರೆದಂತೆ ಗಾಳಿ ಬೀಸುವವರೆಗೆ ಇರುತ್ತದೆ, ಅಧಮನದು ಜಲದ ಮೇಲೆ ಬರದಂತೆ ಬರೆಯುತ್ತಿದ್ದಂತೆ ಅಳಿದು ಹೋಗುತ್ತದೆ; ಆದರೆ ವೈರವು ಇದಕ್ಕೆ ವಿಪರೀತವಾಗಿರುತ್ತದೆ. ಉತ್ತಮನದು ಜಲರೇಖೆಯಂತೆ ಕ್ಷಿಪ್ರನಷ್ಟವಾಗುವ, ಮಧ್ಯಮನದು ಕೆಲ-ಕಾಲವಿರುವ ಮರಳಿನ ಮೇಲಿನ ಬರೆಹದಂತೆ, ಅಧಮನದು ಶಿಲಾಲೇಖದಂತೆ ಚಿರ ಸ್ಥಾಯಿಯಾಗಿರುತ್ತದೆ ಎಂದು ತುಲಸೀದಾಸರು-

ಉತ್ತಮ ಮಧ್ಯಮನೀಚಗತಿಪಾಹನ ಸಿಕತಾಪಾನಿ ।
ಪ್ರೀತಿ ಪರಿಚ್ಛಾತಿಹುನಕಿ ಬೈರಬಿತಿಕ್ರಮ ॥

ಎಂದು ತಿಳಿಸಿದ್ದಾರೆ.

ನಾವೇನೆಲ್ಲ ಸುಖ, ಸಂತೋಷ, ತೃಪ್ತಿ, ಆನಂದ. ಮೋದ, ವಿಶ್ವಾಸ, ಅಭಿಮಾನ, ಅನ್ಯೋನ್ಯತೆ, ಒಲುಮೆ, ಸ್ನೇಹ, ಸಂತೃಪ್ತಿ ದೊರಕಬೇಕೆಂದು ಹಾರೈಸುತ್ತೇವೊ ಇವುಗಳ ಅಂತರಾರ್ಥ ಪ್ರೀತಿ, ಪ್ರೇಮ ನಮಗೆ ಬೇಕು ಎಂದು ಬಯಸುವುದೇ ಆಗಿದೆ. ಬಯಸಿದ ಇವು ನಮಗೆ ಪ್ರಾಪ್ತವಾಗಬೇಕಾದರೆ ನಾವು ಪರರನ್ನು ಪ್ರೇಮಿಸಿದಾಗಲೇ ದೊರಕುವುದೆಂಬುದನ್ನ ಮರೆಯಬಾರದು. ಏಕೆಂದರೆ ಪ್ರೀತಿ, ಪ್ರೇಮ ಎಂಬುದೆಲ್ಲ ಪರಸ್ಪರ ಒಬ್ಬರಿಗೊಬ್ಬರು ನೀಡುವಂತಹದ್ದೇ ಹೊರತು ನೀಡದೆ ಪಡೆಯುವಂತಹದ್ದಲ್ಲ ಎಂಬ ಒಂದು ಹೇಳಿಕೆ ಇದೆ. ಇದನ್ನು ಅರ್ಥೈಸಿಕೊಂಡರೆ ಅಂದರೆ ಪ್ರೀತಿಯೆಂಬುದು ಒಬ್ಬರು ಇನ್ನೊಬ್ಬರಿಗೆ ಕೊಡುವಂತಹದ್ದು ಅರ್ಥಾತ್ ಒಬ್ಬರು ಇನ್ನೊಬ್ಬರ ಮೇಲೆ ತೋರಿಸುವಂತಹದ್ದು ಎಂಬುದು ತಿಳಿದು ಬರುತ್ತದೆ. ಹೀಗಾಗಿ ನಮಗೆ ಪ್ರೀತಿ ಬೇಕಾದರೆ ಮೊದಲು ನಾವು ಪ್ರೀತಿಯನ್ನು ನೀಡಬೇಕು. ಆಗಲೇ ಅವರು ಪ್ರೀತಿಯನ್ನು ನೀಡುತ್ತಾರೆ. ಲೋಕದಲ್ಲಿ ಹೀಗೆ ಒಬ್ಬರು ಇನ್ನೊಬ್ಬರಿಗೆ ಪ್ರೀತಿಯನ್ನು ನೀಡುತ್ತಾ ಹೋದಲ್ಲಿ ಇಡೀ ಲೋಕವೇ ಪ್ರೇಮಮಯದ್ದಾಗಿ ಸರ್ವತ್ರ ಶಾಂತಿ ಪ್ರಾಪ್ತವಾಗುವುದು ಎಂದು ಹೇಳಲು ಸಂಶಯ ಯಾಕೆ? 'ಪ್ರೀತಿ ಎಂದೆಂದೂ ಬಿದ್ದು ಹೋಗುವುದಿಲ್ಲ, ಕಳೆದುಹೋಗುವುದಿಲ್ಲ ಪ್ರವಾದನ ನಾಶವಾಗುತ್ತದೆ. ಮಾತುಗಳು ಕೊನೆ ಮುಟ್ಟುತ್ತವೆ, ವಿದ್ಯೆ ಇಲ್ಲದೆ ಹೋಗಬಹುದು, ಉಳಿದು ಬರುವುದು ನಂಬಿಕೆ, ನಿರೀಕ್ಷೆ ಮತ್ತು ಪ್ರೀತಿ ಮಾತ್ರ, ಇವುಗಳಲ್ಲಿಯೂ ಪ್ರೀತಿ ಎಂಬುದು ಸರ್ವಶ್ರೇಷ್ಠ' ಎಂದು ಕ್ರಿಸ್ತಾನುಯಾಯಿ ಪೌಲನು ಹೇಳಿದ್ದಿದೆ. "ಸಂಪತ್ತು ಹೋಗುತ್ತದೆ, ಸೌಂದರ್ಯ ಅಳಿಯುತ್ತದೆ, ಪ್ರಾಣ ಹಾರಿಹೋಗು

ತ್ತದೆ. ಅಧಿಕಾರ ಶಕ್ತಿ ಕಳೆದು ಹೋಗುತ್ತದೆ. ಆದರೆ ಪ್ರಭು ಉಳಿಯುವನು ಶಾಶ್ವತ. ಪ್ರೇಮ ಉಳಿಯುವುದು ಚಿರಂತರ' ಎಂದು ಸ್ವಾಮಿ ವಿವೇಕಾನಂದರು ಲೋಕದಲ್ಲಿ ಶಾಶ್ವತ ಉಳಿಯುವುದು ದೇವರು ಮತ್ತು ಪ್ರೇಮ ಮಾತ್ರ ಎಂದು ಘೋಷಿಸಿದ್ದುದಿದೆ. ಇದನ್ನು ನೆನಪಿನಲ್ಲಿಟ್ಟುಕೊಂಡು ಪ್ರತಿಯೊಬ್ಬನೂ ನಡೆದಲ್ಲಿ ಪರಸ್ಪರ ಭಾವೈಕ್ಯ ತನ್ನ ತಾನೆ ಉಂಟಾಗುತ್ತದೆ. ಆದಕ್ಕಾಗಿ ಋಗ್ವೇದದಲ್ಲಿ ಹೇಳಿದಂತೆ,

ಸಮಾನೀವ ಆಕೂತಿಃ ಸಮಾನಾ ಹೃದಯಾನಿವಃ

ಸಮಾನಮಸ್ತುವೋ ಮನೋಯಥಾವಃ ಸುಸಹಾಸತಿ ॥

ನಿಮ್ಮೆಲ್ಲರ ಕಲ್ಯಾಣ, ಒಳಿತು ಒಟ್ಟಿಗೇ ಆಗುವಂತೆ, ನಿಮ್ಮೆಲ್ಲರ ಆಲೋಚನೆಗಳು ಸಮಾನವಾಗಿರಲಿ, ನಿಮ್ಮೆಲ್ಲರ ಹೃದಯಗಳು ಸಮಾನವಾಗಿರಲಿ, ನಿಮ್ಮೆಲ್ಲರ ಮನಗಳು ಸಮಾನವಾಗಿರಲಿ ಇದರಿಂದ ಎಲ್ಲರೂ ಸಮಾನ ಭಾವನೆಯುವರು, ಪರಸ್ಪರ ಪ್ರೀತಿ-ವಿಶ್ವಾಸ ಮಾಡುವವರು ಆಗಿ ಎಲ್ಲರೂ ಸುಖ ಶಾಂತಿ ಪಡೆಯಲಿ ಎಂದು ಪ್ರಾರ್ಥಿಸಿ ಜನರಲ್ಲಿ ಪರಸ್ಪರ ಭಾವೈಕ್ಯತೆ ವರ್ಧಿಸುವಂತೆ ವರ್ತಿಸಲು ಸಂಕಲ್ಪ ಮಾಡೋಣ.

# ಶ್ರೀ ಭಗವದ್ಗೀತಾರ್ಥಸಾರದ ಶ್ರೀ ಕೃಷ್ಣಯೋಗಿ

—ಸಾರಂಗ, 1470, ಅಗ್ರಹಾರ, ತುಮಕೂರು–1

ಭಗವದ್ಗೀತೆ ಭಾರತೀಯ ಆಧ್ಯಾತ್ಮಿಕ ಸಂಸ್ಕೃತಿಯ ರನ್ನಗನ್ನಡಿಯಾಗಿರುವುದಲ್ಲದೆ ನಾತನ ವಿಶ್ವಧರ್ಮವನ್ನು ಅನನ್ಯ ಪ್ರತಿಭೆಯಿಂದ ಪ್ರತಿಪಾದಿಸುವ ಮಹಾಗ್ರಂಥ- ಾಗಿದೆ. ದೇಶ, ಕಾಲ, ವರ್ತಮಾನಗಳ ತ್ರಿಪುಟಿಯನ್ನು ಬೇಧಿಸಿ ಏಕಮೇವಾ- ತೀಯ ಪ್ರಭೆಯಿಂದ ಬೆಳಗುತ್ತಿರುವ ಮಹಾಕಾವ್ಯ ಈ ಭಗವದ್ಗೀತೆ. ಇದು ುದ್ಧಿ ಜೀವಿಯನ್ನು ಬದ್ಧ ಜೀವಿಯನ್ನಾಗಿ ಮಾಡಲೆಳಸುವ ಕ್ರಾಂತಿ ಮಂತ್ರ. ್ಯಷ್ಟಿ, ವೃಷ್ಟಿ, ಸಮಷ್ಟಿಗಳ ಜೀವನವನ್ನು ಪರಿವರ್ತಿಸಬಲ್ಲ, ಜ್ಞಾನ ಪ್ರೇಮಗಳ ಡಿಗಲ್ಲು. ಇಂತಹ ಭಗವದ್ಗೀತೆಯನ್ನು ಕನ್ನಡ ಪದ್ಯಗಳನ್ನಾಗಿ ಪರಿವರ್ತಿಸುವಲ್ಲಿ ೂಜ್ಯ ಕೃಷ್ಣಯೋಗಿಗಳ ಪರಿಶ್ರಮ ಇಲ್ಲಿ ದೃಷ್ಟಾಂತವಾಗಿದೆ.

ನಮ್ಮ ಕನ್ನಡ ಭಾಷೆಯಲ್ಲಿ ಭಗವದ್ಗೀತೆಯ ಬಗ್ಗೆ ಉದ್ಗ್ರಂಥಗಳು ಬಹಳ ಡಿಮೆ. ಆದರೂ ಅಂತಹ ಕೊರತೆಯನ್ನು ಪೂಜ್ಯ ಕೃಷ್ಣಯೋಗಿಗಳು ಮುನ್ನೂರು ದಗಳಲ್ಲಿ ಇಡೀ ಗೀತೆಯ ಸಾರವನ್ನು ಸುಲಭವಾಗಿ ಹೆಕ್ಕಿಕೊಟ್ಟಿದ್ದಾರೆ. ಪ್ರತಿ- ೊಂದು ಅಧ್ಯಾಯದ ಸಾರವನ್ನು ಒಂದೊಂದೇ ಚಿಕ್ಕ ಶಬ್ದಗಳಲ್ಲಿ ಸಂಗ್ರಹಿಸಿದ್ದಾರೆ.

ಭಗವದ್ಗೀತೆಯು ಗಾದೆಯಮಾತುಗಳಮುತ್ತಿನ ಸರ. ಇದರಲ್ಲಿರುವ ಮುತ್ತುಗಳು ತ್ಯಂತ ಅಮೂಲ್ಯವಾದವುಗಳು. ಗೀತೆಯ ಪದ್ಯಗಳು ಸುಲಭವೆಂದರೆ ಅತ್ಯಂತ ುಲಭ. ಅತ್ಯಂತಕಷ್ಟವೆಂದರೆ ಕಷ್ಟವೆನ್ನುತ್ತಾರೆ. ಪೂಜ್ಯ ಕೃಷ್ಣಯೋಗಿಗಳ ಮೊಮ್ಮಗ ಾದ ಅ. ನ. ಕೃಷ್ಣರಾಯರು.

" ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋಭಯಾತ್ " ಎಂಬ ಗೀತಾ ಾಕ್ಯವನ್ನು ಗೀತೆಯ ಅರ್ಥದ ವಿಷಯದಲ್ಲಿಯೂ ಅನ್ವಯಿಸಿಕೊಂಡು ಗೀತೆಯ ರ್ಥವನ್ನು ಸ್ವಲ್ಪಮಟ್ಟಿಗೆ ತಿಳಿದುಕೊಂಡವನಿಗೂ ಗಂಡಾಂತರಗಳಲ್ಲಿ ಶಾಂತಿ- ುಂಟಾಗುತ್ತದೆ ಎನ್ನುತ್ತಾರೆ.

ಪೂಜ್ಯ ಆಲೂರ ವೆಂಕಟರಾಯರ ಮಾತಿನಲ್ಲಿ ಹೇಳಬೇಕಾದರೆ ಗೀತೆಯ ನಿಜ- ಾದ ಮರ್ಮವು ಈ ಸುಲಭವಾದ ಅರ್ಥದಲ್ಲಿಲ್ಲ ಆದರ ಗೂಡಾರ್ಥದಲ್ಲಿದೆ.ಆದ್ದರಿಂದಲೇ ್ರೀ ಕೃಷ್ಣನು ಭಗವದ್ಗೀತೆಯಲ್ಲಿ ಇದು ಗುಹ್ಯಶಾಸ್ತ್ರವೂ, ರಾಜವಿದ್ಯೆಯು, ುಹ್ಯತಮವಾದ ಜ್ಞಾನವೂ ಎಂದು ಮೇಲಿಂದ ಮೇಲೆ ಹೇಳತ್ತಾನೆ ಎಂದು ಪ್ರತಿ- ಾದಿಸುತ್ತಾರೆ.

ಇದರಲ್ಲಿ ವಿಶೇಷವೆಂದರೆ ಈ ಇಬ್ಬರ ಅಭಿಪ್ರಾಯಗಳಲ್ಲಿನ ಸಮತೆ ಸುಂದರ ವೆನಿಸುತ್ತದೆ. ಗೀತೆಯು ಒಂದು ದೇಶದ ಒಂದು ಜಾತಿಯ ಅಥವಾ ಪಂಥ ಸೊತ್ತಲ್ಲವೆನ್ನುತ್ತಾರೆ ಸ್ವಾಮಿ ವಿವೇಕಾನಂದ. ಇದು ಇಡೀ ಜಗತ್ತಿನ ಗ್ರಂಥ ಪರಮಾತ್ಮನ ಸ್ವರೂಪವನ್ನು ತಿಳಿಸುವುದೇ ಗೀತೆಯಮುಖ್ಯ ವಿಷಯವಾಗಿದೆ. ಧರ್ಮ ಮತ್ತು ಪರಾಪರ ತತ್ವಗಳು ಅದರ ಮುಖ್ಯ ವಿಷಯಗಳು ಎನ್ನುತ್ತದೆ ವಿಶಿಷ್ಟಾದ್ವೈತ ಇಂತಹ ಹಲವಾರು ಅಭಿಪ್ರಾಯಗಳಿದ್ದರೂ ಗೀತೆಯ ಸಾರವನ್ನು ಶ್ರೀ ಕೃಷ್ಣಯೋ ಗಳು ಸ್ವಲ್ಪದರಲ್ಲೇ ಸಂಗ್ರಹಿಸಿ ಗೀತಗಂಗೆಯ ದಡದಲ್ಲಿ ನಿಂತುಕೊಂಡು ಸ್ತ್ರೀಯರು ತಮ್ಮ ಜ್ಞಾನವನ್ನು ತುಂಬಿಕೊಂಡು ಹೋಗುವಂತೆ ಮಾಡಿದುದಕ್ಕಾಗಿ ಕನ್ನಡಿಗ ರಾದ ನಾವೆಲ್ಲ ಅವರನ್ನು ಸ್ಮರಿಸಬೇಕಾಗಿದೆ.

ಕೀರ್ತಿಶೇಷರಾದ ಆಲೂರವೆಂಕಟರಾಯರೂ ಮತ್ತು ಹೊಸಕೆರೆ ಚಿದಂಬರಯ ನವರು ಪೂಜ್ಯ ಕೃಷ್ಣಯೋಗಿಗಳ ಪರಮಾಪ್ತರು. ಬೆಳ್ಳಾವೆ ನರಹರಿಶಾಸ್ತ್ರಿಗ ನಾಟಕಗಳಲ್ಲಿಯೂ ಯಾವುದಾದರೂ ಒಂದು ಸಂದರ್ಭದಲ್ಲಿ ಕೃಷ್ಣಯೋಗಿಗ ಕನ್ನಡ ಭಗವದ್ಗೀತೆ ಒಂದೇ ಬರುತ್ತಿದ್ದುದು ಅಂದಿನ ಔಚಿತ್ಯವಾಗಿತ್ತು. ಕೃಷ್ಣಯೋಗಿ ಭಗವದ್ಗೀತೆಯ ಕನ್ನಡ ಪದ್ಯಗಳನ್ನು 1930ರಿಂದ ಜನತೆಯ ಮುಂದೆ ಇಡಲ ಪರಿಶ್ರಮಿಸಿದವರು ಇವರು. ಕನ್ನಡ ಕುಲಪುರೋಹಿತರ ಕರ್ನಾಟಕ ಏಕೀಕರಣ ಕರ್ನಾಟಕಪ್ರವಾಸದಲ್ಲಿ ಇದು ಅವರಿಗೆ ವೇದವಾಗಿತ್ತಂತೆ. ಇದು ಕನ್ನಡನಾಡಿನ ಪೂಜ್ಯರ ನಾಲಿಗೆಯಮೇಲೆ ನರ್ತಿಸಿ ಶ್ರೀ ಕೃಷ್ಣ ಯೋಗಿಗಳು ಕನ್ನಡಿಗರ ಹೃದಯವ ಹೊಕ್ಕರಂತೆ. ಭಗವದ್ಗೀತೆಯ ಎರಡನೇ ಅಧ್ಯಾಯದ ಇಪ್ಪತ್ತ ಮೂರನೇ ಶ್ಲೋಕ

ನೈನಂ ಛಿಂದಂತಿ ಶಸ್ತ್ರಾಣಿ
ನೈನಂದಹತಿ ಪಾವಕಃ।
ನಚೈನಂ ಕ್ಲೇದಯಂತ್ಯಾಪೋ
ನಶೋಷಯತೇ ಮಾರುತಃ॥

ಕೃಷ್ಣಯೋಗಿಗಳ ಕನ್ನಡ ಪದ್ಯ

ಯಾವ ಆಯುಧವಾದರೂ ಛೇದಿಸುವುದಿಲ್ಲ
ಪಾವಕ ದಹಿಸಲಾರನು।
ಕೇವಲ ಶಾಶ್ವತ ಸ್ಥಾಣು ಸನಾತನನು
ಈ ವಿಧವನು ತಿಳಿದು ಚಿಂತಿಸದಿರು ಪಾರ್ಥ॥

ಭಗವದ್ಗೀತೆಯ ನಾಲ್ಕನೇ ಅಧ್ಯಾಯ ಹನ್ನೊಂದನೆಯ ಶ್ಲೋಕ.

ಯೇ ಯಥಾ ಮಾಂ ಪ್ರಪದ್ಯಂತೇ
ತಾಂಸ್ಥ ಥೈವ ಭಜಾಮ್ಯಹಮ್ ।
ಮಮ ವರ್ತ್ಮಾನು ವರ್ತಂತೇ
ಮನುಷ್ಯಾಃ ಪಾರ್ಥ ಸರ್ವಶಃ ॥

ಕೃಷ್ಣಯೋಗಿಗಳ ಕನ್ನಡ ಪದ್ಯ

ಯಾವ ಯಾವ ಮನುಜರು ಆವ ಫಲವ ಬಯಸಿ
ಯಾವ ವಿಧದ ಕರ್ಮವ ಮಾಡಿದರೂ ।
ಭಾವಿಸಿ ತಕ್ಕಂಥ ಫಲವ ಕೊಡುವವ ನಾನೇ
ಕೇವಲಾತ್ಮನು ನಾನು ಸಕಲ ದೇವತಾ ರೂಪ....॥

ಇತ್ತೀಚಿನ ದಿನಗಳಲ್ಲಿ ಕೆಲವು ಕನ್ನಡ ಭಾಷಾಂತರ ಭಗವದ್ಗೀತೆಗೆ ಈ ಮೇಲಿನ ಶ್ಲೋಕಗಳ ಮತ್ತು ಕನ್ನಡ ಪದ್ಯಗಳನ್ನು ಹೋಲಿಸಿದರೆ ಅಂದಿನ ಅಧ್ಯಯನಕ್ಕೂ ಇಂದಿನ ಅಧ್ಯಯನ ಕೊರತೆಯ ಕೈಪಿಡಿಗಳಿಗೂ ಕನ್ನಡಿ ಇಟ್ಟಂತಾಗಿದೆ. ಜ್ಞಾನೇಶ್ವರರು, ಲೋಕಮಾನ್ಯ ತಿಲಕರು, ಮಹಾತ್ಮ ಗಾಂಧಿಯವರೂ, ಸಾನೆಗುರೂಜಿ, ಮುಂತಾದವರು ಬರೆದಿರುವ ಗೀತಾ ಭಾಷ್ಯಗಳು ಕನ್ನಡದಲ್ಲಿ ಅನುವಾದಗೊಂಡಿದ್ದರೂ ಗೀತೆಯ ಬಗ್ಗೆ ಕನ್ನಡ ಜನಸಾಮಾನ್ಯರಲ್ಲಿ ಆಸಕ್ತಿ ಬರಲು ಸಾಧ್ಯವಾಗಿಲ್ಲ. ಈ ಕೊರತೆ ನಮ್ಮ ರಾಮಕೃಷ್ಣ ಆಶ್ರಮದ ಪೂಜ್ಯ ಯತೀಶ್ವರರುಗಳೆಲ್ಲರ ಕೊರಗಾಗಿವೆ. ಇದರ ಬಗ್ಗೆ ಅವರ ಕಾಳಜಿಯೂ ಹೆಚ್ಚಾಗಿ ಕಾರ್ಯಪ್ರವೃತ್ತರಾಗಿರುವುದು ನಮ್ಮ ಸಂಸ್ಕೃತಿಯ ಉಳಿವಿನ ಆಶಾಕಿರಣವಾಗಿದೆ.

ಪೂಜ್ಯ ಕೃಷ್ಣಯೋಗಿಗಳು 1826 ರಲ್ಲಿ ಹಾಸನ ಜಿಲ್ಲೆಯ ಅರಕಲಗೂಡಿನಲ್ಲಿ ಜನಿಸಿದರು. ತಂದೆ ನಾರಾಣಪ್ಪ, ತಾಯಿ ವೆಂಕಮ್ಮ ಇವರ ತೊಟ್ಟಲಿನನಾಮ ಕೃಷ್ಣ [ಅರಕಲಗೂಡು ಕೃಷ್ಣಪ್ಪ) ಪೂಜ್ಯರಿಗೆ ಬಾಲ್ಯದಲ್ಲೇ ಮಾತಾಪಿತ ವಿಯೋಗ. ಬೆಂಗಳೂರಿನಲ್ಲಿ ಚಿಕ್ಕಮ್ಮನ ಮನೆಯಲ್ಲಿದ್ದು ವಿದ್ಯಾಭ್ಯಾಸ. ಕನ್ನಡ, ಸಂಸ್ಕೃತ, ತೆಲುಗು ಭಾಷೆಗಳಲ್ಲಿ ಪೂರ್ಣ ಪಾಂಡಿತ್ಯ. ವಂಶಪಾರಂಪರ್ಯವಾದ ವಕೀಲಿ ವೃತ್ತಿ. ಮೈಸೂರು ಆದಿಪತ್ಯಕ್ಕೆ ಸೇರಿದ ಮುವತ್ತೆರಡು ಪಾಳೇಗಾರರ ಮನೆತನಗಳಿಗೆ ಇವರು ವಕೀಲರು. ಕೃಷ್ಣಯೋಗಿಗಳ ವ್ಯಕ್ತಿತ್ವ ಕ್ಷತ್ರಿಯೋಚಿತವಾಗಿತ್ತೆಂದು ಅ.ನ.ಕೃ ರವರ ಜೀವನ ಚರಿತ್ರೆಯಲ್ಲಿ ವ್ಯಕ್ತವಾಗುತ್ತದೆ. ತುಂಬಿದ ಮುಖ, ದಷ್ಟಪುಷ್ಟ ಮೈಕಟ್ಟು, ತಲೆಮೇಲೆ ಹದಿನಾರು ಮೊಳದ ರೇಷ್ಮೆ ರುಮಾಲು ಸೊಂಟದ ಪಟ್ಟಿಯಲ್ಲಿ ನೀಳ್ಗತ್ತಿ. ರಿವಾಲ್ವರ್ ಇವು ಕೃಷ್ಣ ಯೋಗಿಗಳ ವೇಷ ಭೂಷಣಗಳಂತೆ ರಾಜಯೋಗಿಗಳಂತೆ ಬಾಳ್ವೆನಡೆಸಿದ ಪೂಜ್ಯರ ಮನೆಯಲ್ಲಿ ನಿತ್ಯ ಊಟೋಪಚಾರ, ಪೂಜೆ. ಪುಣ್ಯಕಾರ್ಯಗಳೆಲ್ಲದರಲ್ಲಿಯೂ ಅಚ್ಚುಕಟ್ಟು. ಮನೆ ತುಂಬ ಅತಿಥಿಗಳಿರಬೇಕು. ನೂರಾರು ಜನ ಉಂಡು ತಣಿಯ ಬೇಕಂತೆ ಪೂಜ್ಯರ ವಿದ್ವತ್ತು ಮತ್ತು ಆಧ್ಯಾತ್ಮ ಸಾಧನೆಗೆ ಗುರುಗಳಾದ ಪೂಜ್ಯ ಶಿವರಾಮ ಶಾಸ್ತ್ರಿಗಳ

ಪ್ರಭಾವವೇ ಕಾರಣ. ತಮ್ಮ ಗುರುಗಳ ಮೇಲಿನ ಗೀತೆಯೊಂದು ಅವರ ಭಗವದ್ಗೀತಾರ್ಥ ಸಾರ ಕೃತಿಯಲ್ಲಿ ಕಾಣಸಿಗುತ್ತದೆ.

ಏನೂ ಅರಿಯದ ಕೃಷ್ಣನ ಹೃದಯದಿನಿಂತು
ನೀನೇ ಪೇಳಿಸು ಕೃತಿಯನು
ನ್ಯೂನತೆಯಿದ್ದರೆ ಕರುಣದಿಂದ ಕ್ಷಮೆಮಾಡಿ
ಜ್ಞಾನಸಿದ್ಧಿಯನಿತ್ತು ರಕ್ಷಿಸು ಗುರುದೇವಾ....

ಶ್ರೀ ಕೃಷ್ಣಯೋಗಿಗಳು ಎಲ್ಲ ಜೀವಿಗಳಲ್ಲಿಯೂ ಭಗವದಂಶವನ್ನು ಕಾಣುತ್ತಿದ್ದರು. ಯಾರು ಕರೆದರೆ ಅವರಲ್ಲಿ ಹೋಗಿ ಅವರು ಕೊಟ್ಟುದ್ದನ್ನು ಈಶ್ವರ ಪ್ರಸಾದವೆಂದು ಭಾವಿಸಿ ಭುಂಜಿಸುತ್ತಿದ್ದರು. ಶ್ರೀ ಕೃಷ್ಣಯೋಗಿಗಳ ಗ್ರಂಥ ಭಂಡಾರದಲ್ಲಿ ಪಂಚದಶಿ, ಅನುಭವಾಮೃತ, ಶಂಕರಭಾಷ್ಯ, ನಿಜಗುಣಕೃತಿಗಳು ಇತ್ಯಾದಿ ಗ್ರಂಥಗಳು ಅವರ ಪಾತ್ರರಾದ ಅನಕ್ಷರರಿಗೆ ಅಂದೇ ದೊರಕಿದ್ದವಂತೆ. ತೆಲುಗಿನಲ್ಲಿಯೂ ಕೂಡ ವೇದಾಂತ ಬೋಧಕವಾದ ಎರಡು ಗ್ರಂಥಗಳನ್ನು, ಕನ್ನಡದಲ್ಲಿ ನೂರಾರು ಆಧ್ಯಾತ್ಮ ಗೀತೆಗಳನ್ನಲ್ಲದೆ ಬೆಳಗುತ್ತಿ ಪಾಳೇಗಾರರ ವಂಶಾವಳಿಯನ್ನೂ ಕೆಲವು ದಾರ್ಶನಿಕ ಪ್ರಬಂಧಗಳನ್ನು ರಚಿಸಿದ್ದಾರೆ.

ಲೋಕದಲ್ಲಿ ಜ್ಞಾನ, ಪ್ರೇಮಗಳು ನೆಲೆಸಲು ಈ ಧೀಮಂತ ಕನ್ನಡಿಗನ ಅಥವಾ ಇಂತಹವರ ಶ್ರೇಷ್ಠ ಕೃತಿಗಳು ಅಡಿಗಲ್ಲು.

"ಬೇರೆ ಶಾಸ್ತ್ರಗಳು ಎಷ್ಟು ಓದಿದರೇನು ಗೀತೆಯನ್ನು ಚೆನ್ನಾಗಿ ಓದಬೇಕು" ಎಂಬ ಸ್ವಾಮಿ ವಿವೇಕಾನಂದರ ಮಾತಿನಂತೆ ಭಗವದ್ಗೀತೆ ಭಾರತೀಯ ದರ್ಶನಗಳ ಸಾರಸರ್ವಸ್ವ ಎಂಬುದನ್ನು ಶ್ರೀಯುತರು ತಮ್ಮ ಕೃತಿಗಳಲ್ಲಿ ಸಾಬೀತು ಪಡಿಸುತ್ತಾರೆ. 'ಭಗವದ್ಗೀತಾರ್ಥಸಾರ' ಕನ್ನಡ ಆಧ್ಯಾತ್ಮಿಕ ಸಾಹಿತ್ಯಕ್ಕೆ ವಿಶಿಷ್ಟ ಕೊಡುಗೆಯಾಗಿದೆ.

1826 ರಿಂದ 1906ರವರೆವಿಗೆ ಜೀವಿಸಿದ್ದ ಶ್ರೀಕೃಷ್ಣಯೋಗಿಗಳು ಗೀತೆಯ ಪ್ರತಿನುಡಿಯು ಸಮಯೋಚಿತವಾಗಿ ಕನ್ನಡೀಕರಿಸಿ ಜನರ ಬಾಯಲ್ಲಿ ನಲಿಯುವಂತೆ ಮಾಡಿದ್ದಾರೆ. ಇದಕ್ಕೆ ಹಾಸನ ಜಿಲ್ಲೆಯ ಅರಕಲಗೂಡಿನ ಸುತ್ತ ಮುತ್ತಲ ಗ್ರಾಮೀಣ ಹಳೆಯ ತಲೆಗಳೇ ಇಂದಿಗೂ ಸಾಕ್ಷಿ. ಶ್ರೀಕೃಷ್ಣಯೋಗಿಗಳ ಕನ್ನಡ ಭಗವದ್ಗೀತೆ ಹಿರಿಯರೆಲ್ಲರ ನಾಲಿಗೆಯ ಮೇಲಿರುವುದು. ಅದನ್ನು ಕೇಳುವವರಿಗೆ ರೋಮಾಂಚಿತವಾಗುತ್ತದೆ. ಗೀತೆಯನ್ನು ಬಲ್ಲವರು ಇವರ ಅನುಭಾವಪೂರ್ಣ ರಸಾಭಿಜ್ಞತೆಯನ್ನು ಕಂಡು ಆಶ್ಚರ್ಯ ಪಡದಿರಲಾರರು. ವ್ಯಷ್ಟಿ, ಸಮಷ್ಟಿಗಳ ಜೀವನವನ್ನು ಪರಿವರ್ತಿಸಿ ಲೋಕದಲ್ಲಿ ಜ್ಞಾನ ಪ್ರೇಮಗಳು ನೆಲೆಸಲು ಈ ಧೀಮಂತ ಕನ್ನಡಿಗನ ಸೇವೆಯನ್ನು ಮತ್ತು ಕೃತಿಗಳ ಮೌಲ್ಯಗಳನ್ನು ಅರಿಯದಿದ್ದರೆ ಅವುಗಳನ್ನು ಹುಡುಕಿ ಅಧ್ಯಯನ ನಡೆಸಿ ಬದುಕಿನಲ್ಲಿ ಅಳವಡಿಸಿಕೊಳ್ಳದಿದ್ದರೆ. ಚಿಂತನೆ. ಜ್ಞಾನಗಳ ತವರೂರಾದ ಕನ್ನಡನಾಡು ಬಡವಾದೀತು.

(ಆಧಾರಗಳಿಂದ)

# ರಹಸ್ಯಮಯ ಮಹಾದ್ವೀಪದ ದುರ್ಲಭ ದೃಶ್ಯಗಳು

ಬಿ. ಸುಬ್ರಾಯಅಡಿಗ, ರಿ॥ ಉಪಾಧ್ಯಾಯರು, ಸಂಡೂರು, (ಬಳ್ಳಾರಿ ಜಿಲ್ಲೆ)–58311

ನೋಬೆಲ್ ಪುರಸ್ಕಾರ ಪಡೆದ ಅಮೇರಿಕನ್ ಕಾದಂಬರಿಗಾರ ಅರ್ನೆಸ್ಟ್ ಹೆಮಿಂಗ್ವೇ ಒಮ್ಮೆ ಒಬ್ಬಂಟಿಯಾಗಿಯೇ ಆಫ್ರಿಕೆಯ ಕಾಡುಗಳನ್ನು ಸುತ್ತಾಡಿ ಬಂದಿದ್ದರು. ಅವರ ಈ ಸಾಹಸಮಯ ಪ್ರವಾಸ ಆಗ ಎಲ್ಲರ ಗಮನವನ್ನು ಸೆಳೆದಿತ್ತು. ಜನ ಅವರ ಅನುಭವಗಳನ್ನು ಅರಿಯಲು ಉತ್ಸುಕರಾಗಿದ್ದರು. ಆಫ್ರಿಕೆಯ ಕಾಡುಗಳ ಬಗ್ಗೆ ವಿಧವಿಧದ ಪ್ರಶ್ನೆ ಕೇಳಿದರು. ಏಕೆಂದರೆ ಆಗ ಆಫ್ರಿಕಾ ಮಹಾದ್ವೀಪ ರಹಸ್ಯದ ಗಾಢಾಂಧಕಾರದಲ್ಲಿ ಮುಳುಗಿತ್ತು. ಮತ್ತು ಅದರ ಕುರಿತು ಈ ಹಲವಾರು ವದಂತಿಗಳು ಕೇಳಿ ಬರುತ್ತಿದ್ದವು. 'ನಮ್ಮ ಬಳಿ ಟಾರ್ಚ್ ಇದ್ದರೆ ಕಾಡುಗಳಲ್ಲಿ ಯಾವುದೇ ಭೀತಿಗವಕಾಶವಿಲ್ಲ-ಎಂಬ ಮಾತು ನಿಜವೆ?'–ಯಾರೋ ಹೆಮಿಂಗ್ವೇರನ್ನು ಪ್ರಶ್ನಿಸಿದರು.

'ಟಾರ್ಚ್ ಹಿಡಿದು ನೀವು ಅದೆಷ್ಟು ವೇಗವಾಗಿ ಓಡಬಲ್ಲಿರಿ?–ಎಂಬುದನ್ನು ಇದು ಅವಲಂಬಿಸಿರುತ್ತದೆ'–ಹೆಮಿಂಗ್ವೇ ಉತ್ತರಿಸಿದರು.

ಯೂರೋಪ್, ಅಮೇರಿಕೆ ಹಾಗೂ ಆಸ್ಟ್ರೇಲಿಯಾ ಮಹಾದ್ವೀಪಗಳತ್ತ ಎಲ್ಲರೂ ಆಕರ್ಷಿತರಾಗುತ್ತಾರೆ. ಎಲ್ಲರೂ ಇವನ್ನು ನೋಡಬಯಸುತ್ತಾರೆ. ಏಕೆಂದರೆ ಇವುಗಳ ಹವಾಮಾನ ಚೆನ್ನಾಗಿದ್ದು, ಇವು ವಿಕಸಿತ ರಾಷ್ಟ್ರಗಳು. ಅಲ್ಲದೆ ಇಲ್ಲಿಯ ನಿವಾಸಿಗಳು ಬಿಳಿಯರೂ ಸುಂದರರೂ ಆಗಿದ್ದಾರೆ. ಈ ಮಹಾದ್ವೀಪಗಳಲ್ಲಿ ಉದ್ಯೋಗ ಹಾಗೂ ಪ್ರಗತಿಯ ಅವಕಾಶಗಳು ಸಾಕಷ್ಟಿವೆ. ಇಷ್ಟೇ ಅಲ್ಲ-ಈ ಮಹಾದ್ವೀಪಗಳು ನೈಸರ್ಗಿಕ ದೃಷ್ಟಿಯಿಂದಲೂ ಸುಂದರವಾಗಿವೆ.

ಆದರೆ ಆಫ್ರಿಕೆಯ ಬಗ್ಗೆ ಹೆಚ್ಚಿನ ಜನರಿಗೆ ಆಸಕ್ತಿಯಿಲ್ಲ. ತುಂಬಾ ಹಿಂದುಳಿದ ಈ ಮಹಾದ್ವೀಪದ ನಿವಾಸಿಗಳು ಪೂರ್ತಿ ಕಪ್ಪಾಗಿದ್ದಾರೆ. ಇಲ್ಲಿ ಸಹಿಸಲಾಗದಷ್ಟು ಸೆಕೆ. ಬಡತನದಿಂದ ತೊಳಲಾಡುತ್ತಿರುವ ಇವರು ಅಸಭ್ಯರೆಂದೇ ಪರಿಗಣಿಸಲ್ಪಟ್ಟಿದ್ದಾರೆ. ಇಲ್ಲಿ ವಿಶ್ವದಲ್ಲೇ ಅತಿ ದೊಡ್ಡ ಮರುಭೂಮಿಯೆನಿಸಿದ 'ಸಹರಾ' ಇದೆ. ಆದರಿಂದಾಗಿ ಇಲ್ಲಿನ ಬಹು ದೊಡ್ಡ ಭೂಭಾಗದಲ್ಲಿ ಯಾವುದೇ ವಸ್ತು ಬೆಳೆಯುವುದಿಲ್ಲ. ಉದ್ಯೋಗಾವಕಾಶಗಳು ಇಲ್ಲಿನ ಹೆಚ್ಚಿನ ದೇಶಗಳಲ್ಲಿ ಕಡಿಮೆಯೇ. ಎಣ್ಣೆ, ವಜ್ರ, ಬಂಗಾರ ಮೊದಲಾದ ಖನಿಜ ವಸ್ತುಗಳು ವಿಪುಲವಾಗಿ ದೊರೆಯುತ್ತಿರುವುದರಿಂದ ದಕ್ಷಿಣ ಆಫ್ರಿಕ, ಕಾಂಗೋ, ನೈಜೀರಿಯಾ, ಲೀಬಿಯಾ, ಅಲ್ಜೀರಿಯಾ ಮತ್ತು ಮಿಶ್ರ ಪ್ರದೇಶಗಳು ಸಮೃದ್ಧವಾಗಿವೆ.

ದಕ್ಷಿಣ ಆಫ್ರಿಕೆಯಲ್ಲಿ ಐರೋಪ್ಯ ಮೂಲದ ಬಿಳಿಯ ಅಲ್ಪ ಸಂಖ್ಯಾತರ ಸರಕಾರ ಇದುವರೆಗೂ ಇದ್ದು, ಇದೀಗ ಅದು ಸ್ವತಂತ್ರವಾಗಿದೆ. ಬಿಳಿಯರ ಸರಕಾರ ಇಲ್ಲಿಯ ಮೂಲನಿವಾಸಿ, ನೀಗ್ರೋ ಹಾಗೂ ಏಷ್ಯದ ಕರಿಯರ ಬಗ್ಗೆ ಭೇದ ಭಾವದ ಧೋರಣೆ ಅನುಸರಿಸುತ್ತಿತ್ತು. ಇಲ್ಲಿ ಬಂಗಾರ ವಿಪುಲವಾಗಿ ಸಿಗುತ್ತಿದ್ದುದರಿಂದ ಈ ಪ್ರದೇಶ ಸಾಕಷ್ಟು ವಿಕಾಸಹೊಂದಿದೆ. ಸಹರಾರಕ್ಕೆ ಹೊಂದಿಕೊಂಡಿರುವ ಉತ್ತರ ಆಫ್ರಿಕೆಯ ದೇಶಗಳಾದ ಲಿಬಿಯಾ, ಆಲ್ಜೀರಿಯಾ, ಮಿಸ್ರ ಮೊದಲಾದವುಗಳಲ್ಲೂ ಪಶ್ಚಿಮ ಆಫ್ರಿಕೆಯ ದೇಶವಾದ ನೈಜೀರಿಯಾದಲ್ಲೂ ಸಾಕಷ್ಟು ತೈಲ ದೊರೆಯುತ್ತದೆ. ಈ ಆದಾಯದಿಂದ ಈ ದೇಶಗಳು ಬಹಳ ವಿಕಾಸಹೊಂದಿವೆ. ಈ ದೇಶಗಳು ತಮ್ಮಲ್ಲಿ ಶಿಕ್ಷಣ ಹಾಗೂ ವಿಕಾಸಕ್ಕಾಗಿ ವಿದೇಶೀ ವಿಶೇಷಜ್ಞರನ್ನು ಆಮಂತ್ರಿಸಿವೆ. ಅವರಲ್ಲಿ ಭಾರತೀಯರೂ ಇದ್ದಾರೆ.

ನೈಜೀರಿಯಾ, ಲಿಬಿಯಾ ಮತ್ತು ತಂಜಾನಿಯಾದ ವಿಕಾಸ ಕಾರ್ಯಗಳಲ್ಲಿ ಭಾರತೀಯರು ಅಧಿಕ ಸಂಖ್ಯೆಯಲ್ಲಿ ಭಾಗವಹಿಸುತ್ತಿದ್ದಾರೆ. ಇವರಿಗೆ ಈ ದೇಶಗಳು ಸ್ವಲ್ಪವೂ ಒಗ್ಗುತಿಲ್ಲ. ಆದರೆ ಕೈತುಂಬ ಸಂಬಳ ಸಿಗುತ್ತಿರುವುದರಿಂದ ಅಲ್ಲಿ ದುಡಿಯುತ್ತಿದ್ದಾರೆ.

ಶಿಕ್ಷಣ ಹಾಗೂ ತರಬೇತಿಯ ಕೊರತೆಯಿಂದಾಗಿ ಇಲ್ಲಿಯ ನಿವಾಸಿಗಳು ಸ್ವತಃ ವಿಕಾಸಕಾರ್ಯಗಳನ್ನು ಕೈಗೆತ್ತಿಕೊಳ್ಳುತ್ತಿರಲಿಲ್ಲ. ಎಂತಲೇ ಇವರು ವಿದೇಶೀ ಶಿಕ್ಷಕರನ್ನು ವಿಶೇಷಜ್ಞರನ್ನು ಆಕರ್ಷಕ ವೇತನದ ಮೇಲೆ ತಮ್ಮಲ್ಲಿಗೆ ಕರೆಯಿಸಿಕೊಂಡರು. ಆದರೆ ಈಗ ಇವರು ಈ ಸಮಸ್ಯೆಯ ಬಗ್ಗೆ ಜಾಗರೂಕರಾಗುತ್ತಿದ್ದಾರೆ.

ಆಫ್ರಿಕಾ ಮಹಾದ್ವೀಪ ಇತರ ಮಹಾದ್ವೀಪಗಳಿಗಿಂತ ಕಡಿಮೆ ಆಕರ್ಷಕವೆಂಬುದು ನಿಜವಾದರೂ ಇಲ್ಲಿ ಏನೇನೂ ಆಕರ್ಷಣೆಯಿಲ್ಲವೆಂದು ಹೇಗಳೆಯುವಂತಿಲ್ಲ. ಇಲ್ಲಿರುವ ಅಪೂರ್ವ ದೃಶ್ಯಗಳು ಇತರೆಡೆ ಖಂಡಿತ ದೊರೆಯಲಾರವು. ಉದಾಹರಣೆಗಾಗಿ ಇಲ್ಲಿ ಕಾಣಿಸಿರುವ ಜೀವಜಂತುಗಳು ಬೇರೆಲ್ಲೂ ಸಿಗವು. ಇವುಗಳಲ್ಲಿ ಜೀಬ್ರಾ, ನೀರ್ಗುದುರೆ, ಜಿರಾಫೆ–ಮೊದಲಾದವು ಉಲ್ಲೇಖನೀಯ. ಆನೆ, ಚಿರತೆ, ಸಿಂಹ ಮೊದಲಾದವು ವಿಪುಲವಾಗಿ ಕಾಣಸಿಗುತ್ತವೆ.

ತಂಜಾನಿಯಾದ ನಗೋರೋ ನ್ಯಾಶನಲ್ ಪಾರ್ಕ್ ತುಂಬ ಪ್ರಸಿದ್ಧವಾದುದು, ಇದೊಂದು ಉಪ್ತ ಜ್ವಾಲಾಮುಖಿಯಲ್ಲಿದ್ದು ಪರ್ಯಟನ ದೃಷ್ಟಿಯಿಂದ ವಿಶ್ವದ ವಿಶಿಷ್ಟ ಆಕರ್ಷಣೆಯೆನಿಸಿದೆ. ಇಲ್ಲಿಯೇ ಸುಮಾರು ಹತ್ತು ಸಾವಿರ ಅಡಿ ಎತ್ತರವಾದ "ಕಿಲಮನಜಾರೋ"ದ ಶಿಖರವಿದ್ದು ಅದು ಯಾವಾಗಲೂ ಹಿಮಾವೃತವಾಗಿರುತ್ತದೆ.

ಆಫ್ರಿಕೆಯ ವೈಶಿಷ್ಟ್ಯಗಳು :- ಆಫ್ರಿಕೆ ತನ್ನ ಅಪಾಯಕಾರಿ ದಟ್ಟಡವಿಗಳಿಗೆ ಪ್ರಸಿದ್ಧವಾದುದು. ಜತೆಗೆ ಸಾಹಸಿಗಳಿಗೆ ಆಹ್ವಾನವನ್ನು ನೀಡುವಂತಹದು. ಆಫ್ರಿಕೆಯ ದುರ್ಲಭ ವನಸ್ಪತಿ ಹಾಗೂ ವನ್ಯ ಜೀವಿಗಳಲ್ಲಿ ವನಸ್ಪತಿ ಶಾಸ್ತ್ರಿಗಳಿಗೂ ಜೀವ ಶಾಸ್ತ್ರಿಗಳಿಗೂ ಗಾಢ ಅಭಿರುಚಿ ಇರುವಂತೆಯೇ ಈ ಮಹಾದ್ವೀಪದ ಮೂಲ ಜನಾಂಗಗಳ ಬಗ್ಗೆ ಸಮಾಜ ಶಾಸ್ತ್ರಿಗಳ ಆಸಕ್ತಿ ಕೆರಳಿದೆ. "ಸಹರಾ" ಮರುಭೂಮಿಯ ಗರ್ಭದಲ್ಲಿ ಖನಿಜಗಳ ಅಪಾರ ಭಂಡಾರ ವಿದೆಯೆಂದು ಭೂಗರ್ಭಶಾಸ್ತ್ರಿಗಳ ಹೇಳಿಕೆ.

ಈ ರೀತಿ ಆಫ್ರಿಕೆ ಇತರ ಮಹಾದ್ವೀಪಗಳಷ್ಟು ಆಕರ್ಷಕವಾಗಿರದೆ ಹೋದರೂ ಯುರೋಪು ಹಾಗೂ ಅಮೇರಿಕೆಯ ಜನರು ಇದರ ಬಗ್ಗೆ ಬಹಳಷ್ಟು ಅಭಿರುಚಿ ತಳೆಯುತ್ತಾರೆ. ಅದಕ್ಕೆಂದು ಇವರು ಅದನ್ನು ಹೆಚ್ಚು ಹೆಚ್ಚಾಗಿ ನೋಡ ಬರುತ್ತಾರೆ. ಆಳವಾಗಿ ಪರಿಶೀಲಿಸಿದರೆ ಇದರ ಆಕರ್ಷಣೆ ಬೇರೆ ರೀತಿಯದು. ಇದರ ಅನನ್ಯತೆಯೇ ಇದರ ಆಕರ್ಷಣೆ. ಎಂತಲೇ ಅಮೇರಿಕೆಯ "ಫ್ಲೋರಿಡಾ" ರಾಜ್ಯದ ಟೆಂಪಾ ಎಂಬಲ್ಲಿರುವ ಬುಶ್ ಗಾರ್ಡನಿನಲ್ಲಿ ಮಾಡಲಾದ ಏರ್ಪಾಡಿನಿಂದಾಗಿ ಪ್ರೇಕ್ಷಕರು ಆಫ್ರಿಕೆಗೆ ಹೋಗದೆಯೇ ಅಲ್ಲಿಯ ವೈಶಿಷ್ಟ್ಯಗಳ ಮಾಹಿತಿ ಪಡೆಯುವರು. "ದ ಡಾರ್ಕ್ ಕಾಂಟಿನೆಂಟ್" ಅರ್ಥಾತ್ ರಹಸ್ಯಮಯದ್ವೀಪ ಎಂಬುದು ಪ್ರದರ್ಶನ ಸ್ಥಳದ ಹೆಸರು.

ಈ ಪಾರ್ಕಿನಲ್ಲಿ ಆಫ್ರಿಕಾ ಮಹಾದ್ವೀಪದ ದುರ್ಲಭ ಆಕರ್ಷಣಗಳನ್ನು ಸಜೀವವಾಗಿ ಪ್ರದರ್ಶಿಸಲಾಗಿದೆ. ಆದರೂ ಅರ್ನೆಸ್ಟ್ ಹೆಮಿಂಗ್ವೇ ತಮ್ಮ ಯಾತ್ರಾವರ್ಣನೆಯಲ್ಲಿ ಹೇಳಿದಂತೆ ಮರದ ಕೊಂಬೆಯಿಂದ ಜೋತಾಡುವ ವಿಶಾಲ ಹೆಬ್ಬಾವಿನ ಬಾಯಿಯಲ್ಲಿ ಸಿಕ್ಕಿ ಬಿದ್ದಿರುವ ಜಿಂಕೆಯ ರುಂಡ; ಹೊರಗೇ ಇರುವ ಜಿಂಕೆಯ ಕೊಂಬುಗಳು ಹೆಬ್ಬಾವು ಮತ್ತು ಜಿಂಕೆ-ಎರಡೂ ಸತ್ತಿರುವ ಸ್ಥಿತಿ-ಇಂತಹ ಅಪೂರ್ವ ದೃಶ್ಯಗಳನ್ನು ನೀವು ಕಾಣಲಾರಿರಿ.

"ಬುಶ್ ಗಾರ್ಡನಿನಲ್ಲಿ" ಆಫ್ರಿಕಾ ಪ್ರದರ್ಶಿನಿಯನ್ನು ಏಳು ಭಾಗಗಳಾಗಿ ವಿಂಗಡಿಸಲಾಗಿದೆ. ಅವುಗಳಲ್ಲಿ ವನ್ಯಜೀವಿ, ಆಫ್ರಿಕೆಯ ಪೇಟೆಗಳ ಹಾಗೂ ಅಲ್ಲಿಯ ತಿಂಡಿ ತಿನಿಸುಗಳ ವಿಭಾಗ ವಿಶೇಷ ಉಲ್ಲೇಖನೀಯ.

ಈ ಭಾಗಗಳಲ್ಲಿ ಒಂದೆಡೆ ಹುಲ್ಲಿನ ಮೈದಾನಿನಲ್ಲಿ ವನ್ಯಜೀವಿಗಳು ತಿರುಗಾಡುತ್ತಿದ್ದರೆ, ಇನ್ನೊಂದೆಡೆ ನೀರಿನ ದಡದಲ್ಲಿ ಆಫ್ರಿಕೆಯ ಹುಲಿಗಳು ಕುಸ್ತಿಮಾಡುತ್ತಿರುವೆ. ಇದೇ ರೀತಿ ಒಂದೆಡೆ ಕಾಂಗೋನದಿಯಲ್ಲಿ ನಾಕೆ ಸಾಗುತ್ತಿದ್ದರೆ, ಇನ್ನೊಂದೆಡೆ ಮೊರಕ್ಕೋದ "ಮಾರಾಕೇಶ್" ಎಂಬೊಂದು ಹಳ್ಳಿಯಲ್ಲಿ ಕುಶಲ ಕರ್ಮಿಗಳು ತಮ್ಮ ಕೆಲಸ ಮಾಡುತ್ತಿರುತ್ತಾರೆ.

ಬುಶ್‌ಗಾರ್ಡನಿನ ಉದ್ಘಾಟನೆ ೩೫ ವರ್ಷಗಳ ಹಿಂದೆ ಮಾರ್ಚ್ ೧೯
ರಲ್ಲಿ ನಡೆದಿತ್ತು. ೩೦೦ ಎಕ್ರೆ ಪ್ರದೇಶದಲ್ಲಿ ಹಬ್ಬಿದ ಈ ಪಾರ್ಕ್ ಅಮೇರಿಕೆಯ ದೊ
ಮೃಗಾಲಯಗಳಲ್ಲೊಂದಾಗಿದೆ.

ಆಫ್ರಿಕಾ ಮಹಾದ್ವೀಪ ಹಾಗೂ ಅದರ ನಿವಾಸಿಗಳನು ಈ ರೀತಿ ಚಿತ್ರಿಸಿರ
ಬೇರಾವ ರಾಷ್ಟ್ರವನ್ನು ನೀವು ಕಾಣಲಾರಿರಿ. ಈ ಪಾರ್ಕಿನಲ್ಲಿ ಆಫ್
ಯಲ್ಲಿ ಕಾಣಸಿಗುವ ಹಳ್ಳಿಗಳ ಒಂದು ಸರ್ಕಸ್ ಕೂಡಾ ಇವೆ. ತರಬೇತಿ ಪ
ಮಕಾವೋ ಹಾಗೂ ಕೋಕಾಟೂಜ್ ಪಕ್ಷಿಗಳು ಪ್ರೇಕ್ಷಕರನ್ನು ರಂಜಿಸುತ್ತವೆ.

## ಆಫ್ರಿಕೆಯ ನೋಟ

ಈ ಪಾರ್ಕಿನಲ್ಲಿ ತಿರುಗಾಡಿದರೆ ಆಫ್ರಿಕೆಯ ಬಗ್ಗೆ ಸಾಕಷ್ಟು ವಿಷಯ ತಿಳಿಯುತ್ತ
ಇಲ್ಲಿ ಆಫ್ರಿಕೆಯ ಹೋಟೆಲ್, ಅಂಗಡಿ ಹಾಗೂ ಆಟಗಳ ಏರ್ಪಾಡಿದೆ. ಆಫ್ರಿಕೆ
ಪ್ರಾಣಿಗಳ ಗದ್ದಲವನ್ನು ನೀವಿಲ್ಲಿ ಕೇಳಬಹುದು.

ಬುಶ್ ಗಾರ್ಡನಿನಲ್ಲಿ ೩೦೦೦ ಕ್ಕೂ ಹೆಚ್ಚು ಆಫ್ರಿಕೆಯ ಪ್ರಾಣಿಗಳಿವೆ. ಅ
ಗಳಲ್ಲಿ ಹೆಚ್ಚಿನವು ನೈಸರ್ಗಿಕ ಸ್ಥಿತಿಯಲ್ಲೇ ಇರಿಸಲ್ಪಟ್ಟಿವೆ. ಪ್ರಾಣಿ ವಂಶಾಭಿವೃ
ಹಾಗೂ ವ್ಯವಸ್ಥಾ ಕುಶಲತೆಯಿಂದಾಗಿ ಈ ಪಾರ್ಕಿಗೆ ಹಲವಾರು ಪುರಸ್ಕಾರಗಳ
ದೊರೆತಿವೆ.

೧೯೮೦ ರಲ್ಲಿ ಬುಶ್‌ಗಾರ್ಡನಿಗೆ ಬಂಗಾಳದ ಎರಡು ಬಿಳಿ ಹುಲಿಗಳನ
ತರಿಸಲಾಯಿತು. ಈ ವೇಳೆ ಅಮೇರಿಕೆಯ ಏಳು ಮೃಗಾಲಯಗಳಲ್ಲಿ ಬಂಗಾಳ
ಬಿಳಿ ಹುಲಿಗಳಿವೆ.

ಈ ಪಾರ್ಕಿನ ಸುತ್ತಾಟ ಮೊರಕ್ಕೋದ ಮಾರಾಕೇಶ್ ಹಳ್ಳಿಯಿಂದಾರ
ವಾಗುವುದು. ಈ ಹಳ್ಳಿಯಲ್ಲಿ ಅಲ್ಲಿಯ ಕೈಗಾರಿಕೆಯ ಸೊಬಗನ್ನು ನೋಡಬಹುದ
ನೀವು ಅಲ್ಲಿಯ ಪೇಟೆಯ ಮೂಲಕ ಹಾದುಹೋಗುವಾಗ ನಿಮಗೆ ಇಷ್ಟ ಬ
ವಸ್ತುಗಳನ್ನು ಕೊಳ್ಳಬಹುದು. ಇಲ್ಲಿ ಆಕರ್ಷಕ ಸಂಗೀತ ಕಿವಿಗೆ ಬೀಳುತ್ತ
ಒಬ್ಬ ಹಾವಾಡಿಗ ತನ್ನ ಹಾವುಗಳನ್ನು ಪ್ರದರ್ಶಿಸುತ್ತಿರುವ ನಾಲ್ವರು ನರ್ತಕಿಯ
ಪ್ರಾಚೀನ ನೃತ್ಯ ಕಲೆಯಿಂದ ವರ್ಶಕರನ್ನು ರಂಜಿಸುತ್ತಾರೆ. ಈ ನರ್ತಕಿಯ
ಹೊಟ್ಟೆಯ ಭಾಗ ನಗ್ನವಾಗಿರುತ್ತದೆ.

ಆ ಬಳಿಕ ನೀವು ಇಲ್ಲಿ ಕೆನಡಾ ರಾಜಧಾನಿ 'ನೈರೋಬಿ'ಯ ನೋಟವನ
ನೋಡುತ್ತೀರಿ. ಇಲ್ಲಿ ಮಕ್ಕಳು ಆನೆಯನ್ನೇರಿ ತಿರುಗಾಡುತ್ತಾರೆ. ಇಲ್ಲೊಂ
ಬೆಟ್ಟವೂ ಇದ್ದು, ಅಲ್ಲಿ ರಾತ್ರಿಯ ದೃಶ್ಯ ಕಾಣಸಿಗುವುದು. ರಾತ್ರಿ ತಿರುಗಾಡು
ಜೀವಜಂತುಗಳನ್ನು ನೀವು ಕಾಣುತ್ತೀರಿ,

ಪಾರ್ಕಿನಲ್ಲಿ ಒಂದು 'ಮರಿಗಳ ಶಾಲೆ' ಯೂ ಇದೆ. ಅಲ್ಲಿ ಮರಿಗಳನ್ನು ಒಲುಪ್ರೀತಿಯಿಂದ ಸಾಕಲಾಗುತ್ತದೆ. ಒಂದೇ ವರ್ಷದಲ್ಲಿ ಇಲ್ಲಿ ೧೦೦೦ಕ್ಕೂ ಹೆಚ್ಚು ಮರಿಗಳು ಹುಟ್ಟಿದ್ದವು.

ಆಫ್ರಿಕೆಯ 'ಸೆರೆಂಗೇಟೀ ನ್ಯಾಶನಲ್ ಪಾರ್ಕ್' ದುರ್ಲಭ ಪ್ರಾಣಿಗಳಿಗಾಗಿ ವಿಶ್ವದಲ್ಲೇ ಪ್ರಸಿದ್ಧವಾದುದು. ಇದು ಸುರಕ್ಷಿತ (ರಿಜ್ಞರ್ವ್ಡ್) ಪಾರ್ಕ್. ಇಲ್ಲಿ ಅದನ್ನೇ ಹೋಲುವ ಪಾರ್ಕ್ ಸೃಷ್ಟಿಸಲಾಗಿದೆ. ಇದರಲ್ಲಿ ಜಿರಾಫೆ, ಆನೆ, ಖಡ್ಗ-ಮೃಗ ಮೊದಲಾದವು ಅಲೆಯುತ್ತಿರುತ್ತವೆ. ಪ್ರೇಕ್ಷಕರು ಅವನ್ನು ಒಂದು ರೈಲು-ಗಾಡಿಯಲ್ಲಿ ಕುಳಿತು ನೋಡಬಹುದು.

ಆಫ್ರಿಕೆಯ ಪ್ರಾಚೀನ ಮರುಭೂಮಿಯಾದ 'ಟಿಂಬಕಟೂವನ್ನು' ಇಲ್ಲಿಚಿತ್ರಿಸ ಲಾಗಿದೆ. ಇಲ್ಲಿ ದರ್ಶಕರು ಮರುಭೂಮಿಯಲ್ಲಿ ಒಂಟೆಗಳ ಇಲ್ಲವೇ ಅರಬ್ಬಿ ಕುದುರೆ ಗಳ ಸವಾರಿಯ ಅನುಭವವನ್ನು ಸವಿಯಬಲ್ಲರು. ಸಾಹಸಿಗಳಿಗಾಗಿ ಇಲ್ಲಿ ಉಸುಕಿನ ಬಿರುಗಾಳಿಯನ್ನು ನಿರ್ಮಿಸಲಾಗಿದೆ ಅದರ ನಡುವೆ ಒಂಟೆಯನ್ನೇರಿ ರೋಮಾಂಚಕ ಅನುಭವ ಪಡೆಯಬಲ್ಲರು.

ಟಿಂಬಟೂ ಪ್ರದರ್ಶಿನಿ ಕ್ಷೇತ್ರದಲ್ಲಿ ಒಂದು ಡಾಲ್ಫಿನ್ ಥಿಯೇಟರ್ ಕೂಡ ಇದೆ ಅಲ್ಲಿ ಡಾಲ್ಫಿನ್ ಮೀನುಗಳ ಚಮತ್ಕಾರಗಳನ್ನು ಕಾಣಬಹುದು.

ಟಿಂಬಕಟೂವಿನ ಹತ್ತಿರದಲ್ಲೇ ಸೈನಲೀವಲ್ ಎಂಬ ಪ್ರದೇಶವನ್ನು ತೋರ್ಪಡಿಸಲಾಗಿದೆ. ಅಲ್ಲಿ ಜನರ ಗೌಜುಗದ್ದಲವಿಲ್ಲದೆ ಚಿಂಪಾಂಜಿ ಹಾಗೂ ಆನೆಗಳ ಆಟಗಳನ್ನು ನೋಡಬಹುದು.

ನೆರೆಯ ಕಾಂಗೋ ವಿಭಾಗದಲ್ಲಿ ಮರದ ದಿಮ್ಮಿಗಳ ಕಂಬಿಗಳಮೇಲೆ ಕಾಂಗೋ ನದಿಯನ್ನು ದಾಟುವ ಅಪಾಯಕರ ಅನುಭವ ದೊರೆಯುತ್ತದೆ. ಇಲ್ಲಿ ದರ್ಶಕರು ಆಫ್ರಿಕೆಯ ಹಲವಾರು ಭಯಂಕರ ಪರಿಸ್ಥಿತಿಗಳನ್ನು ಸ್ವತಃ ಅನುಭವಿಸಬಲ್ಲರು.

ಈ ಪಾರ್ಕನ್ನು 'ಬುಶ್ ಎಂಟರ್‌ಟೇನ್‌ಮೆಂಟ್ ಕಾರ್ಪರೇಶನ್' ವ್ಯವಸ್ಥೆ ಗೊಳಿಸಿತ್ತು. ಆಫ್ರಿಕೆಯಲ್ಲಿ ನೆಲಸಿದ ಜರ್ಮನ್ ಪ್ರವಾಸಿಗಳ ಹಾಗೂ ಅವರ ಮೇಲುಂಟಾದ ಸಾಂಸ್ಕೃತಿಕ ಪ್ರಭಾವದ ಪರಿಚಯವೂ ನಿಮಗಿಲ್ಲಿ ದೊರೆಯುವುದು.

ಅಮೇರಿಕೆಯ ಫ್ಲೋರಿಡಾ ರಾಜ್ಯದ ಹವಮಾನ ತಣ್ಣಗಿಲ್ಲ. ಇಲ್ಲಿ ಹಿಮ-ಬೀಳುವುದಿಲ್ಲ. ಹೀಗಾಗಿ ಉಷ್ಣವಲಯ ಪ್ರದೇಶದ ಪ್ರಾಣಿಗಳನ್ನು ಇಲ್ಲಿ ಇರಿಸಲೂ ಅವುಗಳ ವಂಶಾಭಿವೃದ್ಧಿ ನಡೆಸಲೂ ಕಷ್ಟವೆನಿಸುವುದಿಲ್ಲ.

## ಬೇರೆ ಬೇರೆ ಸಂಸ್ಕೃತಿಗಳು

ಭೂಮಧ್ಯಸಾಗರಕ್ಕೆ ಹೊಂದಿಕೊಂಡ ಆಫ್ರಿಕಾದ ಮಹಾದ್ವೀಪದ ಉತ್ತರ ಭಾಗದ ಜನಾಂಗ ಹಾಗೂ ಸಂಸ್ಕೃತಿ ದಕ್ಷಿಣ, ಮಧ್ಯ ಹಾಗೂ ಪಶ್ಚಿಮ ಆಫ್ರಿಕೆಯ ನಿವಾಸಿಗಳಿಗಿಂತ ಬೇರಾದುದು. ಉತ್ತರದ ಜನ ಬರ್ಬರ ಮೊದಲಾದ ಜಾತಿಗಳಿಗೆ ಸಂಬಂಧಿಸಿದ್ದರೆ, ದಕ್ಷಿಣ,ಮಧ್ಯ ಪಶ್ಚಿಮ ಆಫ್ರಿಕೆಯ ಜನ ಹೆಚ್ಚಾಗಿ ನೀಗ್ರೋಗಳು. ಬುಶ್ ಗಾರ್ಡನಿನಲ್ಲಿ ಈ ಎರಡು ಪ್ರದೇಶಗಳನ್ನು ಚಿತ್ರಿಸಲಾಗಿದೆ.

ಆಫ್ರಿಕೆಯ ರಹಸ್ಯಮಯ ಮಹಾದ್ವೀಪ ಈಗ ಮೆಲ್ಲಮೆಲ್ಲನೆ ಹೊರ ಜಗತ್ತಿಗೆ ಪರಿಚಿತವಾಗುತ್ತಲಿದೆ. ಒಬ್ಬ ಆಫ್ರಿಕನ್ ಮುಖಂಡನ ಪ್ರಸಾರ ಆಫ್ರಿಕೆ ಈಗ ಎಚ್ಚೆತ್ತಿದೆ. ಉಳಿದ ವಿಶ್ವಕ್ಕೆ ಇದರ ಮಹತ್ವಿಕೆ ಅರಿವಾಗುತ್ತಲಿದೆ. ಹಲವು ಕ್ಷೇತ್ರಗಳಲ್ಲಿ ಆಫ್ರಿಕನರು ಮುಂದೆ ಬರುತ್ತಿದ್ದಾರೆ. ಅವರು ಉಳಿದ ಜಗತ್ತನ್ನು ಎದುರಿಸಲು ಸಿದ್ಧವಾಗುತ್ತಿದ್ದಾರೆ.

ವಿಶ್ವ ಸಂಸ್ಕೃತಿಯಲ್ಲಿ ಆಫ್ರಿಕನ್ ಸಂಸ್ಕೃತಿಗೆ ತನ್ನದೇ ಆದವಿ ಶಿಷ್ಟ ಸ್ಥಾನವಿದೆ. ಹಲವರಿಗೆ ಇದರಲ್ಲಿ ಆಕರ್ಷಣೆ ಕಾಣಿಸುತ್ತದೆ. ಬುಶ್ ಗಾರ್ಡನ್‌ದಲ್ಲಿ ಅವರು ಸ್ವಲ್ಪ-ವಾದರೂ ರಸಾಸ್ವಾದನ ಮಾಡಬಲ್ಲರು. (ಹಿಂದಿಯಿಂದ)

# -ಪ್ರೇಮವಿವಾಹಗಳು

ವಿದ್ವಾನ್ ಎಸ್. ಷಡಕ್ಷರಿ, ಅಧ್ಯಾಪಕರು, ಸಂಸ್ಕೃತ ಕಾಲೇಜು, ಸಿದ್ಧಗಂಗಾಮಠ.

ಇಂದು ಕೆಲಮಟ್ಟಿಗೆ ಪ್ರೇಮವಿವಾಹಗಳು ನಡೆಯುತ್ತಿರುವುದು ಕಾಣ ಬರುತ್ತಿದೆ. ಇದನ್ನೇ ಇಂಗ್ಲೀಷಿನಲ್ಲಿ Love 'marriage' ಎನ್ನುತ್ತಾರೆ. ಗಂಡು-ಹೆಣ್ಣು ಪರಸ್ಪರ ಒಗ್ಗೂಡುವುದಕ್ಕೆ 'ಪ್ರೇಮವಿವಾಹ' ಎನ್ನುತ್ತಾರೆ. ಈ ಮದುವೆಯಲ್ಲಿ ಪ್ರೀತಿಸುವ ಹುಡುಗ ಅಥವಾ ಹುಡುಗಿ ಒಂದೇ ಜಾತಿಯವರಲ್ಲದಿರಬಹುದು. ಶ್ರೀಮಂತ ಇಲ್ಲವೆ ಬಡವರಾಗಿರಬಹುದು. ಈ ವಿವಾಹ ಧರ್ಮಕ್ಷೇತ್ರದಲ್ಲಾಗಬಹುದು. ರಿಜಿಸ್ಟರ್ಡ್ ಮದುವೆಯೇ ಆಗಬಹುದು.

ಪ್ರೇಮ ವಿವಾಹ ನಿಕೃಷ್ಟವಾದುದಲ್ಲ. ಪ್ರಾಚೀನ ಭಾರತದಲ್ಲಿ ಇಂಥ ವಿವಾಹಗಳು ಹೇರಳವಾಗಿ ನಡೆದಿವೆ. ಶಕುಂತಲ-ದುಷ್ಯಂತರ ಗಾಂಧರ್ವ ವಿವಾಹ, ರಾಜಕುಮಾರಿ ಸಾವಿತ್ರಿ, ಬಡವ ಸತ್ಯವಾಂನರ ಸ್ವಯಂವರ ವಿವಾಹ, ದಮಯಂತಿ ನಳನನ್ನು ಆರಿಸಿದ್ದು, ಅರ್ಜುನ-ಸುಭದ್ರ, ಕೃಷ್ಣ-ರುಕ್ಮಿಣಿ ಇವರೆಲ್ಲರ ವಿವಾಹವು ಯಾವುದೇ ಪದ್ಧತಿಯಿಂದಾದರೂ ಪ್ರೇಮ ವಿವಾಹದ ಪ್ರತಿರೂಪಗಳು ತಾನೆ. ?

ಇಲ್ಲಿ ಪ್ರೇಮಿಗಳು ಯಾವ ಪಂಗಡಕ್ಕೆ ಸೇರಿದವರು ಎಂಬುದು ಮುಖ್ಯವಾಗಿರಲಿಲ್ಲವಾದರೂ ಇವರು ಕದ್ದು ಎಲ್ಲಿಯೋ ಓಡಿಹೋಗಿ ಬೆಟ್ಟ-ಗುಡ್ಡ, ಕಾಡು-ಮೇಡು, ಊರುಕೇರಿಗಳಲ್ಲಿ ತಂಗಿದ್ದು ಯೌವನದ ಸುಖವನ್ನು ಕಳೆದು ಬಂದ ಕಳಪೆಯ ಪ್ರೇಮಿಗಳಲ್ಲ. ಹಿರಿಯರ ಮನ್ನಣೆ ಪಡೆದು ಧಾರ್ಮಿಕ ವಿಧಿಗೆ ಒಳಪಟ್ಟವರು. ಧಾರ್ಮಿಕ ವಿಧಿಯಿಲ್ಲದೆ ಯಾವ ವಿವಾಹವೂ ಪೂರ್ಣವಲ್ಲ ಎಂಬುದು ಇಲ್ಲಿ ಗಮನಾರ್ಹ.

ಪ್ರೇಮ ವಿವಾಹಗಳಿಗೆ ಪ್ರಚೋದನೆ ಏನು ? ಎಂದು ಪ್ರಶ್ನಿಸಬಹುದು. ಪರಸ್ಪರ ಅನುರಾಗ ಮಾತ್ರ. ಅನುರಾಗ ಬೆಳೆದ ಮೇಲೆ ಮಾನಸಿಕವಾಗಿ ಒಬ್ಬರನ್ನು ಪತಿ ಅಥವಾ ಪತ್ನಿ ಎಂದು ಸ್ವೀಕರಿಸಿದ ಮೇಲೆ ಹಿರಿಯರು ಒಪ್ಪಲಿಲ್ಲ ಎಂದ ಮಾತ್ರಕ್ಕೆ ಬೇರೊಬ್ಬರನ್ನು ಪತಿ-ಪತ್ನಿಯಾಗಿ ಸ್ವೀಕರಿಸಲು ಪ್ರೇಮಿಗಳು ಇಚ್ಛಿಸುವುದಿಲ್ಲ.

ಆದರೆ ಹಿರಿಯರ ದೃಷ್ಟಿಯಲ್ಲಿ ಯುವ ಜನಾಂಗಕ್ಕೆ ಇಂತಹ ಸ್ವಾತಂತ್ರ್ಯ ಸಲ್ಲದು. ಕುಲ, ಗೋತ್ರ, ಜಾತಕ ಇವುಗಳ ಹೊಂದಾಣಿಕೆಯಿಂದಲೇ ವಿವಾಹಗಳು ಯಶಸ್ವಿಯಾಗುತ್ತವೆ. ಎನ್ನುವುದು ಇವರ ನಂಬಿಕೆ. ಅದನ್ನ ದಾಟ ನಡೆದವರು ವರ್ಣಸಂಕರರಾಗುತ್ತಾರೆ.

ಯಾವುದಾದರೊಂದರಲ್ಲಿ ಒಂದೇ ರುಚಿಯ ಅಭಿರುಚಿ ಅಥವಾ ಪರಿಶ್ರಮವಿರುವ ಗಂಡು ಹೆಣ್ಣುಗಳು ಪರಸ್ಪರ ಗೌರವಿಸಿ ಪ್ರೀತಿಸುವುದು ಸ್ವಾಭಾವಿಕ. ಬರಿಯ ದೈಹಿಕ ಆಕರ್ಷಣೆ ಮಾತ್ರವಲ್ಲದೆ ಇಬ್ಬರಿಗೂ ಆಳವಾದ ಅನುರಾಗವಿದ್ದರೆ ಇಂಥವರು ಮದುವೆಯಾಗುವುದರಲ್ಲಿ ತಪ್ಪೇನು ಇಲ್ಲ. ಹೀಗೆ ಒಂದು ವೇಳೆ ವಿಜಾತಿ ಪ್ರೇಮಿಗಳಾಗುವವರು ವಿವಾಹವಾಗುವ ಮುನ್ನ ಅವರ ಒಳಿತು ಕೆಡುಕುಗಳನ್ನು ಯೋಚಿಸಿ ಒಂದು ನಿರ್ಧಾರಕ್ಕೆ ಬರುವುದು ಯೋಗ್ಯವೆನಿಸುತ್ತದೆ.

ಏಕೆಂದರೆ ಅಂತರ್ಜಾತಿಯ ವಿವಾಹ ತಮ್ಮ ಸಂತತಿಗೆ, ಎಂದಾಗ ಹಿರಿಯರು ಒಪ್ಪಲು ಹಿಂದೆ ಮುಂದೆ ನೋಡುತ್ತಾರೆ. ಸಮಾಜ ತನ್ನ ಬಿರುಗಣ್ಣಿನಿಂದ ದೃಷ್ಟಿಸುತ್ತದೆ. ಪ್ರೇಮ ವಿವಾಹದ ಹಾದಿ ಹೂವಿನ ಹಾಸಿಗೆಯಲ್ಲ ಮುಳ್ಳುದಾರಿ. ಹಿರಿಯರ ಮಾತನ್ನು ಮೀರಿ ಲಗ್ನವಾದಾಗ ನಾಳೆಯ ಕಷ್ಟನಷ್ಟಗಳಿಗೆಲ್ಲಾ ಪ್ರೇಮಿಗಳೇ ಸಂಪೂರ್ಣ ಜವಾಬ್ದಾರರು. ಇಂಥವರು ಸಮಾಜದ ವ್ಯಂಗ್ಯ ನುಡಿಗಳಿಗೂ ಸಿದ್ಧರಿರಬೇಕು. ಪ್ರೇಮ ವಿವಾಹಗಳಲ್ಲಿ ದೈಹಿಕ ಆಕರ್ಷಣೆ ಕಡಿಮೆಯಾದಾಗ, ಸಮಾಜದ ಕಷ್ಟಗಳು ಅತಿಯಾದಾಗ ಅವನ್ನೂ ಸಹಿಸಲಾಗದೆ ಸಂಸಾರ ಹೊಡೆದು ಹೋಗುವುದುಂಟು. ಒಬ್ಬರಂತು ತಮ್ಮ ಧರ್ಮವನ್ನು ತ್ಯಜಿಸಿ ಮತ್ತೊಬ್ಬರ ಆಚಾರ-ವಚಾರ; ಆಹಾರ-ವಿಹಾರಗಳನ್ನೂ ಗೌರವಿಸಲೇ ಬೇಕಾಗುತ್ತದೆ. ಬಾಲ್ಯದಿಂದಿ ಬೆಳೆದು ಬಂದ ನಂಬುಗೆ, ಧರ್ಮ, ಶ್ರದ್ಧೆಗಳನ್ನು ಬದಲಾಯಿಸುವುದು ಕಷ್ಟವಾಗಿ ಪರಸ್ಪರ ಏರುಪೇರಿನ ಪ್ರಶ್ನೆಗಳು ಏಳುತ್ತವೆ ಸಮಸ್ಯೆಯು ತಲೆ ಭಾರವಾಗುತ್ತದೆ. ಸಂಸ್ಕೃತಿಯೊಂದಿಗೆ ತಾದಾತ್ಮ್ಯ ಸಾಧಿಸ ಬೇಕಾಗುತ್ತದೆ. ನನ್ನ ಧರ್ಮವನ್ನೇ ಸ್ವೀಕರಿಸು ಎಂದು ಒತ್ತಾಯವಾಗಲಿ, ಬಲಾತ್ಕಾರವಾಗಲೀ ಉಂಟಾದಲ್ಲಿ ಬಾಂಧವ್ಯಕ್ಕೆ ಧಕ್ಕೆ ಉಂಟಾಗುವುದು. ನಾಳೆ ಮಕ್ಕಳಾದಾಗ ಅವರು ಯಾವ ಜಾತಿ, ಮತ, ಧರ್ಮ, ಸ್ವೀಕರಿಸಬೇಕು ? ಎಂಬ ಪ್ರಶ್ನೆ ಉದ್ಭವಿಸುತ್ತದೆ. ಯುವತಿ ಯಾದವಳಿಗಂತು ಸಂಕೊಲೆಗಳೇರ್ಪಡುತ್ತವೆ. ತಂದೆ ತಾಯಿಗಳು ದೂರವಿರಿಸಬಹುದು. ನೆರೆಹೊರೆಯವರು ಹಿಯಾಳಿಸಬಹುದು. ಇವರಿಂದ ಮಾನಸಿಕ ತೊಳಲಾಟ ಉಂಟಾಗುತ್ತದೆ. ಆದುದರಿಂದ ಯುವ ಪ್ರೇಮಿಗಳು ಈ ಬಗ್ಗೆ ಯೋಚಿಸಿ ಒಂದು ನಿರ್ಧಾರಕ್ಕೆ ಬರುವುದು ಸೂಕ್ತವೆನಿಸುತ್ತದೆ.

ಜಾತಿ ಪಂಥಗಳು ಮಾನವ ನಿರ್ಮಿಸಿಕೊಂಡವು. ಮೂಲತಃ ನಾವೆಲ್ಲರೂ ಮನುಷ್ಯ ಜಾತಿಯೇ ಅಲ್ಲವೆ ? ಎಂದು ಶತಮಾನಗಳ ಹಿಂದೆ ಹರಿದಾಸರರು

"ಕುಲ ಕುಲ ವೆನ್ನುತಿಹರು, ಕುಲಯಾವುದಯ್ಯಾ
ಸಜ್ಜನರಿಗೆ ಆತ್ಮ ಯಾವ ಕುಲ ? ಜೀವ ಯಾವ ಕುಲ ?"

ಎಂದು ಹಾಡಿದ್ದಾರೆ. ಆದರೆ ಇಲ್ಲಿ ಒಂದು ಮಾತು ಗಮನಾರ್ಹ. ದಾಸರ ತತ್ವಗಳನ್ನು, ಶರಣರವಚನಗಳನ್ನು ಕೇವಲ ಸ್ವಾರ್ಥಕ್ಕಾಗಿ, ತಮ್ಮ ಲಾಲಸೆಗಳಿಗಾಗಿ ಬಾಯಲ್ಲಿ ಹೇಳಿಕೊಂಡು ವ್ಯವಹರಿಸಿದರೆ ಬಾಳು ಬರಡಾಗುತ್ತದೆ. ಬದುಕು ಬಂಡಾಯವಾಗುತ್ತದೆ. ಯಾವುದೇ ತತ್ವಗಳನ್ನು ಅಳವಡಿಸಿಕೊಂಡು ಒಪ್ಪಿಕೊಳ್ಳಬೇಕಾದರೆ ವಿಶಾಲ ಹೃದಯ ಬೇಕು. ವಿವೇಕ, ವೈಚಾರಿಕತೆ ಬೇಕು. ದಾಸರು ಹೇಳಿದಂತೆ ಸಜ್ಜನಿಕೆ, ಸಮನ್ವಯ, ಮತ್ತು ಆತ್ಮ-ಜೀವಗಳ ಪರಿಜ್ಞಾನ ಬೇಕು. ಹಣ, ಅಂತಸ್ತು, ಅಧಿಕಾರ, ರೂಪ, ಯೌವನ, ವರದಕ್ಷಿಣೆ ಇತ್ಯಾದಿಗಳಿಗೆ ಇಲ್ಲಿ ಸ್ಥಾನವಿಲ್ಲ. ಹಾಗಾದಾಗ ಮಾತ್ರ ದಾಸರ ತತ್ವ ಹಾಗೂ “ಕುಲವನರಸದಿರಿಂಬೋ; ಗುಣನ್ನೇನಾದಿರಿಂಬೋ” ಎಂಬ ಶರಣರ ವಚನವಾಗಲೀ ಸಾರ್ಥಕವಾದಾವು. ಮತ್ತು ಜಾತ್ಯತೀತ ಸಮಾಜ ನಿರ್ಮಾಣವಾಗಿ ಪ್ರೇಮ ವಿವಾಹಗಳು ಊರ್ಜಿತವಾದಾವು.

## ಗಂಗಾ–ಅಂತರಂಗ

ಹರಿವ ಜಲ ಒಂದೆನೇ ಗಂಗೆ ಎನಲಾಗದು,
ಹರಿವ ಮನವೂ ಗಂಗೆಯೇ ಎನಲಹುದು.
ಮಾನಸ ಗಂಗೋತ್ರಿಯಿಂ,
ಇಳಿದು ಬರುವಳು ಶ್ರೀ ಗಂಗೆ;
ಮಾನವನ ಶಿರಸಿನೊಳು,
ಮೂಡುವಳು ಭಾವಗಂಗೆ;
ಗಂಗಾಜಲ ಮಲಿನಗೊಂಡಿರೆ,
ಸ್ನಾನಪಾನಕ್ಕೆಂತು ಸಲ್ಲದೋ;
ಅಂತರಂಗ ಕಲ್ಮಷಗೊಂಡಿರೆ,
ಧ್ಯಾನ ಮನನಕ್ಕಂತೇ ಒಲ್ಲದು;
ಅದು ಕಾರಣ;
ಪರಿಶುದ್ಧ ಜಲವಾಹಿನಿಯೇ,
ಪರಮ ಪಾವನ ಗಂಗಾ;
ಪರಸಿದ್ಧಿ ಸಾಧಿಸಿದ ಮನವೇ,
ಅಂತರಂಗದ ಸಿದ್ಧಗಂಗಾ.

ಶಾರದಾ. ಜಡೆ
ಹೈದರಾಬಾದ್.

# ಜೈವಿಕ ವಿದ್ಯುತ್ತು ಮತ್ತು ಮಾನವ ಮಿದುಳು

—ಬಿ ಎಸ್. ಭಾಸ್ಕರ್ ಭಾಷಾ ನಿಕಾಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ—583 211

"ಯೂಲಿತ್ಯಾಯಾ ಲಿಸಿಮಿಲೋವ್" ಎಂಬ ರಷ್ಯನ್ ವಿಜ್ಞಾನಿ 1867ರಲ್ಲಿ ತನ್ನ ಪ್ರಯೋಗಾಲಯದಲ್ಲಿ ಮರಣಶಯ್ಯೆಯಲ್ಲಿದ್ದ ಒಬ್ಬ ವ್ಯಕ್ತಿಯ ತಲೆಬುರುಡೆಯ ಶಸ್ತ್ರಚಿಕಿತ್ಸೆಗೆ ತೊಡಗಿದ್ದಾಗ ಅವನ ಕೈ ಬೆರಳುಗಳು ವ್ಯಕ್ತಿಯ ಮಿದುಳನ್ನು ಸಮೀಪಿಸುತ್ತಿದ್ದಂತೆಲ್ಲಾ ಒಂದು ರೀತಿಯ ಸ್ಪಂದನಕ್ಕೊಳಗಾಗಿ ಅದರ ಸ್ನಾಯು-ಗಳು ಹಿಂದೆ ಸರಿಯುತ್ತಿತ್ತು. ಅಂದು ಅದನ್ನು ಕಂಡ ಆತನ ಕುತೂಹಲವೇ ಜೈವಿಕ ವಿದ್ಯುತ್ತಿನ ಮಹಾ ಭಂಡಾರವನ್ನು ಜಗತ್ತಿಗೆ ನೀಡಿತು.

ಸ್ವಾಭಾವಿಕ ವಿಭಜನೆ-ವಿಕಸನದಲ್ಲಿ ಅಣುಗಳ ನಡುವೆ ಎಲೆಕ್ಟ್ರಾನ್ ಕಣಗಳ ಚಲನೆಯಿಂದ ಉತ್ಪತ್ತಿಯಾಗುವ ಶಕ್ತಿಯನ್ನೇ ವಿದ್ಯುತ್ ಎಂದು ಕರೆಯಲಾಗಿದೆ. ಬೆಳಕು, ಶಾಖ, ಧ್ವನಿ ಕಾಂತಶಕ್ತಿಗಳಾಗಿ ಪರಿವರ್ತನೀಯವಾದುದು ಈ ವಿದ್ಯುತ್.
ಅತಿ ಸೂಕ್ಷ್ಮಸ್ಥಿತಿ ಮತ್ತು ಗಾತ್ರದ ಎರಡು ಕ್ರೋಮೋಸೋಮುಗಳು ತಾಯಿ ಗರ್ಭ ಸೇರಿ ಸುಮಾರು 280 ದಿನಗಳನಂತರ 28 ರಿಂದ 23 ಸೆಂಟಿಮೀಟರ್‌ನಷ್ಟು ಉದ್ದ ಬೆಳೆದು ಮಗುವಾಗಿ ಹೊರ ಬರುತ್ತದೆ. ಅಂದರೆ ಗರ್ಭಸ್ಥ ಜೀವಿಯ ದಿನ ವೊಂದರ ಸರಾಸರಿ ಬೆಳವಣಿಗೆ ಒಂದು ಮಿಲಿ ಮೀಟರ್ ಅಥವಾ 1·17 ಮಿಲಿಯನ್ ಕಣಗಳು. ಬೆಳವಣಿಗೆಯ ಹಂತದ ಈ ಅಣು ವಿಕಸನ ನಡೆಯುವಾಗ1–2, 2–4, 4–8, 8-16 ಹೀಗೆ ಬೆಳೆಯುತ್ತಾ ಈ ಸ್ವಾಭಾವಿಕ ಕ್ರಿಯೆಯಲ್ಲಿ ಎಲೆಕ್ಟ್ರಾನುಗಳ ಚಲನೆಯ ಫಲಿತವಾಗಿ ವಿದ್ಯುಚ್ಛಕ್ತಿಯು ಉತ್ಪತ್ತಿಯಾಗುತ್ತಾ ಹೋಗಿ ಜೈವಿಕ ವಿದ್ಯುತ್ ನೆಲೆಗೊಳ್ಳುತ್ತದೆ. ಪ್ರಾಣ ಎಂದು ಉಪನಿಷತ್ತಿನಲ್ಲಿಯೂ, ಈ ವಿದ್ಯು-ತ್ಕಂಪನದ ಫಲಿತವನ್ನು 'ಹೋಲಿಸ್ಪಿರಿಟ್, ಘೋಸ್ಟ್' ಎಂದು ಬೈಬಲ್ ಮತ್ತು "ಫತಿಹ" ಎಂದು ಕುರಾನ್ ವರ್ಣಿಸಿದೆ. ಒಂದು ನಿರ್ದಿಷ್ಟ ಪ್ರಮಾಣದ ಜೈವಿಕ ವಿದ್ಯುತ್ ಉತ್ಪತ್ತಿಯಾಗುವುದರೊಂದಿಗೆ ಮಿದುಳು ರಚನೆಯಾಗುತ್ತಾ ಹೋಗಿ ಅದರಲ್ಲಿ ಶೇಖರಗೊಳ್ಳುತ್ತಾ ಹೋಗಿ ಕೊನೆಗೆ ಜೈವಿಕ ವಿದ್ಯುತ್ತಿನ ಶೇಖರಾಗಾರವೇ ಆದಾಗುತ್ತದೆ. ಮಿದುಳಿನ ಬಳ್ಳಿಯು ಆಕಾರದಲ್ಲಿ ವಿದ್ಯುನ್ಮಂಡಲದ ಆಕಾರದಲ್ಲಿ ಇದ್ದು ಅದರೊಳಗೆ ರಕ್ತವಿರದೆ ಪೂರ್ಣ ವಿದ್ಯುತ್ ತುಂಬಿರುತ್ತದೆ. ಈ ಮಿದುಳು ಬಳ್ಳಿಯಿಂದ ಹೊರಟ ನರತಂತುಗಳಲ್ಲಿ ಹರಿಯುವ ರಕ್ತದ ಮೂಲಕ ಇದರ ವಿದ್ಯುತ್ ತರಂಗಗಳು ಹಾಯ್ದು ದೇಹದ ಆಯಾಯಾ ಭಾಗದ ಸ್ನಾಯುಗಳ ಮೂಲಕ ಅವಶ್ಯ ಕ್ರಿಯೆಯನ್ನು ಮಾಡಿಸುತ್ತವೆ. ಇದಕ್ಕೆ ಮುಖ್ಯ ಪ್ರೇರಕ ಎಂದರೆ ಆಲೋಚನೆ.

ಈ ಆಲೋಚನೆ ಎನ್ನುವುದು ಇತ್ತೀಚಿನವರೆಗೆ ಒಂದು ದೈವದತ್ತವಾದುದೆಂದು ಭಾವಿಸಲ್ಪಟ್ಟ ತತ್ವಜ್ಞಾನಿಗಳು, ಅಧ್ಯಾತ್ಮ ಜೀವಿಗಳು ಮತ್ತು ನಂತರ ಮನಶಾಸ್ತ್ರೀಯ ವಿದ್ವಾಂಸರ ತಾರ್ಕೀಕ ಅಂಶವಾಗಿತ್ತು. ಆದರೆ ಜೈವಿಕ ವಿದ್ಯುತ್ತಿನ ಗುರ್ತಿಸುವಿಕೆಯೊಂದಿಗೆ ಈ ಆಲೋಚನೆ ಎನ್ನುವ ಅಂಶವು ಜೀವಿ ಶಾಸ್ತ್ರೀಯವಾಗಿ ವ್ಯಾಖ್ಯಾನಿಸಲ್ಪಟ್ಟಿತು. ಆಂತರಿಕ ಅಥವಾ ಬಾಹ್ಯ ಶಾಬ್ದಿಕವಾದ ಮಾನಸಿಕ ವರ್ತನೆಯನ್ನೇ ಆಲೋಚನೆ ಎಂದು ಬಿ.ಎಫ್. ಸ್ಕಿನ್ನರ್ ಅಭಿಪ್ರಾಯ ಪಟ್ಟರೆ, 18 ನೆಯ ಶತಮಾನದ ಪ್ರಸಿದ್ಧ ವಿದ್ಯುದ್ವಿಜ್ಞಾನಿ 'ಅಲೆಸ್ಸಾಂಡ್ರಿ ವೋಲ್ಟಾ' ಈ "ಆಲೋಚನೆ" ಎನ್ನುವುದನ್ನು ಮೆದುಳಿನ ವಿದ್ಯುನ್ಮಂಡಲದಲ್ಲಿನ ವಿದ್ಯುತ್ಪ್ರವಾಹದ ನಡುವೆ ಉಂಟಾಗುವ ಕಾಂತಕ್ಷೇತ್ರದ ಮಿಡಿತದ ಫಲವಾಗಿ ಆಗುವ ಸ್ಪಂದನ ಅಥವಾ ಸಂವೇದನೆಯೇ " ಆಲೋಚನೆ " ಎಂದಿದ್ದಾನೆ. ಈ ವ್ಯಾಖ್ಯೆಗೆ ಈ ತನಕ ಧಕ್ಕೆ ಉಂಟಾಗಿಲ್ಲ. ಇಂತಹ ಆಲೋಚನೆ, ವಿವೇಚನೆಯನ್ನು ಹೊಂದಿರುವುದರಿಂದಲೇ ಬೀಗುತ್ತಾನೆ.

ದೇಹದ ಜೀವಕೋಶ ಪೊರೆಗಳು ಈ ಹೇರಳ ವಿದ್ಯುತ್ತನ್ನು ನಿಯಂತ್ರಣ ದಲ್ಲಿಡುವ 'ಕಪ್ಯಾಸಿಟೇಟರ್' ಆಗಿ ಕೆಲಸ ಮಾಡುತ್ತದೆ. ಈ ಸ್ವಾಭಾವಿಕ ಅಣು ವಿಭಜನ ವಿಕಸನದಿಂದ ಉತ್ಪನ್ನವಾಗುವ ಜೈವಿಕ ವಿದ್ಯುತ್ತನ್ನು ಶೇಖರಿಸಿಕೊಂಡು ಆವಶ್ಯವೆನಿಸಿದಾಗ ಅಗತ್ಯವೆನಿಸಿದಷ್ಟು ಬಿಡುಗಡೆ ಮಾಡಿ ಮುಂದಿನ ಜೈವಿಕ ಕ್ರಿಯೆ ವರ್ತನೆಗಳನ್ನು ಸಹಾಯ ಮಾಡುವ ಶೇಖರಾಗಾರವೇ ಈ ಮಿದುಳು. ಸೌಂಡ್ ಬಾಡಿಯಲ್ಲಿ ಸೌಂಡ್ ಮೈಂಡ್ ಇರಬೇಕಾದರೆ ಈ ವಿದ್ಯುತ್ ಉತ್ಪಾದನೆ ಮತ್ತು ವಿತರಣೆ ಸೂಕ್ತವಾಗಿರಬೇಕು. ಇದರ ಏರುಪೇರಾಗುವಿಕೆಯನ್ನು "ಪೆಥಾಲಜಿಕಲ್ ಥಿಂಕಿಂಗ್ ನ್ಯೂರೋಸಿಸಿ ಅಥವಾ ಸೈಕೋಸಿಸ್" ಎಂದು ಕರೆಯಲ್ಪಡುವ ಹುಚ್ಚು, ಬುದ್ಧಿ ಭ್ರಮಣೆ ಎನ್ನುತ್ತೇವೆ.

ನಾವು, ಬಯಸಿದ ಚಿಂತನೆ ಮಾಡಿದ ಚಿತ್ರ ನಮ್ಮ ಒಳಗಣ್ಣಿಗೆ (ಆಪ್ಟಿಕ್ ನರ್ವ್) ಕಾಣುವ ಸಾಮರ್ಥ್ಯದ ಆಧಾರವೇ ದೂರದರ್ಶನದ ಅನ್ವೇಷಣೆಗೆ ಕಾರಣವಾಯಿತು. ಹಿಂದೆ ಕೇಳಿದ್ದ ಒಂದು ಮಾತನ್ನು ನೆನಪಿಸಿಕೊಂಡಾಗ ಅದೇ ಧ್ವನಿ, ದಾಟಿಯಲ್ಲಿ ಒಳಗಿವಿಗಳಿಗೆ ಕೇಳಿಸುವ ವಿಧಾನದಿಂದಲೇ ಟೆಲಿಗ್ರಾಂ, ಟೆಲಿಫೋನ್ ಮೊದಲಾದುವು ಮೂಡಿತು. ಈ ರೀತಿಯಾಗಿ ಎಲ್ಲ ವೈಜ್ಞಾನಿಕ ಆವಿಷ್ಕಾರಗಳಿಗೂ ಮಾನವನ ಮೆದುಳೇ ಪ್ರೇರಕ ಮತ್ತು ಮಾದರಿಯಾಯಿತು.

ದೃಶ್ಯ, ಭಾಷೆ, ಭಾವನೆ ಮೊದಲಾದವುಗಳೆಲ್ಲವನ್ನು ನಮ್ಮ ಅನುಭವಕ್ಕೆ ಮೂಡಿಸಬೇಕಾದರೆ ಈ ಮೆದುಳು ನಿರ್ವಹಿಸುವ ಪ್ರಮುಖ ಕಾರ್ಯವೆಂದರೆ ತನ್ನಲ್ಲಿರುವ ನಿಶ್ಚಲ ವಿದ್ಯುತ್ತನ್ನು (ಸ್ಟಾಟಿಕ್ ಕರೆಂಟ್) ವಿವಿಧ ಶಕ್ತಿ ರೂಪಗಳಿಗೆ ಪರಿವರ್ತಿಸಿ

ಆಯಾ ಜ್ಞಾನೇಂದ್ರಿಯ ಮತ್ತು ಕರ್ಮೇಂದ್ರಿಯಗಳಿಗೆ ತಲುಪಿಸುವುದು. ಇದರಲ್ಲಿ ಪ್ರಮುಖವಾದ ಕ್ರಿಯೆಯೆಂದರೆ ದೃಶ್ಯ, ಶಬ್ದಗಳನ್ನು ಸಂಕೇತಗಳಾಗಿಯೂ ಸಂಕೇತಗಳನ್ನು ದೃಶ್ಯ, ಶಬ್ದಗಳಾಗಿಯೂ ಪರಿವರ್ತಿಸುವುದು. ಇದೇ ಒಟ್ಟಾರೆ ನಮ್ಮ ಸ್ಥೂಲ-ಸೂಕ್ಷ್ಮ ಬದುಕಿನ ಸೂಕ್ಷ್ಮ ಕ್ರಿಯೆ. ಇದರಿಂದಲೇ ನಾವು.

ವಿದ್ಯುದುಪಕರಣಗಳನ್ನು ಉತ್ಪಾದಿಸುವುದರಲ್ಲಿ ಜಪಾನ್ ದೇಶವು ಜಗತ್ತಿನಲ್ಲಿ ಅತಿ ಶ್ರೇಷ್ಠವಾದರೂ ಜೈವಿಕ ವಿದ್ಯುತ್ತಿನ ಬಗ್ಗೆ ಪ್ರಯೋಗ, ಸಂಶೋಧನೆಗಳನ್ನು ಮಾಡಿದ ನಿಸ್ಸೀಮರೆಂದರೆ, ರಷ್ಯನ್ನರೇ. ಮನುಷ್ಯ ಕನಸ್ಸಿನಲ್ಲಿ ಕಾಣುತ್ತಿರುವ ಚಿತ್ರವನ್ನು ಟಿ. ವಿ. ಪರದೆಯ ಮೇಲೂ ತೋರಿಸಿದರು.

ಮೆದುಳು ಒಂದು ವಿದ್ಯುನ್ಮಂಡಲದ ಮೂಲ ಶಕ್ತಿ ಬಿಂದುವಾಗಿದ್ದು ನರತಂತು ಮತ್ತು ಸ್ನಾಯುಗಳು ಅದರ ವಾಚಕ ಮಾರ್ಗಗಳಾಗಿದ್ದರೂ ಇವುಗಳ ನಡುವೆ ಅಯಸ್ಕಾಂತೀಯ ಕಾಂತಕ್ಷೇತ್ರವೂ ನೆಲೆಗೊಂಡಿರುತ್ತದೆ. ಇದರ ಅಯಸ್ಕಾಂತೀಯ ಉತ್ತರ ಧೃವವು ತಲೆಯ ಬುರುಡೆಯ ಹಿಂಭಾಗದ ಸೆರೆಬ್ರಮ್ ಆಗಿದ್ದು, ಇದರ ಮುಂಭಾಗವು ಅಂದರೆ ನಮ್ಮ ಮುಖದ ದಿಕ್ಕು ದಕ್ಷಿಣ ಧೃವವಾಗಿರುತ್ತದೆ ಈ ದಕ್ಷಿಣ ಧೃವವು ಭೌಗೋಳಿಕ ಉತ್ತರ ಧೃವದತ್ತ ತಿರುಗಿದಾಗ ಪರಸ್ಪರ ಆಕರ್ಷಣೆಗೊಳಗಾಗಿರುವುದರಿಂದ ಮನುಷ್ಯನ ಆಲೋಚನಾ ತರಂಗಗಳು ಏರುಪೇರಿಲ್ಲದೆ ಸಮತಲ ಕಕ್ಷೆಯಲ್ಲಿ ಸಾಗುವುದರಿಂದ ಮನುಷ್ಯನ ಮನಸ್ಸಿನ ಏಕಾಗ್ರತೆ ಉಂಟಾಗುತ್ತದೆಂದು ಇಂದಿನ ಜೈವಿಕ ವಿದ್ಯುದ್ವಿಜ್ಞಾನದ ಸಾಧಿತ ಸೂತ್ರ. ನಮ್ಮ ಸನಾತರೂ ಯೋಗ ಅಥವಾ ತಪಸ್ಸಿಗೆ ಕೂಡುವಾಗ ಉತ್ತರಾಭಿಮುಖವಾಗಿ ಕೂಡಬೇಕೆಂಬುದು ಅನುಭವದಿಂದ ಮಾತ್ರವೇ ಕಂಡುಕೊಂಡ ಸತ್ಯವಾಗಿರಬಹುದು. ಭೌತ ಮತ್ತು ಖಗೋಲ ವಿಜ್ಞಾನಿಗಳ ಸಿದ್ಧಾಂತದಂತೆ ಉತ್ತರ ಧೃವ ಎನ್ನುವುದು ವಿದ್ಯುತ್ ಕಾಂತೀಯ ಶಕ್ತಿ ಕೇಂದ್ರ ಬಿಂದು. ಆದ್ದರಿಂದಲೇ ಭೂಮಿಯ ಗೋಲವು ಉತ್ತರವನ್ನು ಮೇಲ್ಮುಖವಾಗಿ ಹೊಂದಿದ್ದು ನಿಂತಿದೆ. ಅದರ ಮೇಲೆ ವಾಸಿಸುವ ಜೀವಿಗಳಾದ ನಮ್ಮೊಳಗಿನ ಜೈವಿಕ ವಿದ್ಯುತ್ ಸಹ ಒಂದು ರೀತಿಯಲ್ಲಿಧೃವದೊಡನೆ ಸಾಪೇಕ್ಷ ಸಿಧ್ಧಾಂತಕ್ಕೆ ಬದ್ಧವಾಗಿದೆ. ಆದ್ದರಿಂದಲೇ ಶಾರೀರಿಕ ವ್ಯತ್ಯಯಗಳು ಮನುಷ್ಯನ ಮನಸ್ಸು-ಬುದ್ಧಿಯಮೇಲೆ ತೀವ್ರ ಪರಿಣಾಮವನ್ನು ಬೀರುತ್ತವೆ. ಆದ್ದರಿಂದ ಈ ಭಾವ ಶರಾವತಿಯು ಸೂಕ್ತ ಜೋಗಜಲಪಾತವಾಗಿ ಧುಮ್ಮಿಕ್ಕಿದರೆ ಈ ವಿದ್ಯುದುತ್ಪಾದನೆಯೂ ವಿತರಣೆಯೂ ಸೂಕ್ತವಾಗಿರುತ್ತದೆ. ಇಲ್ಲದಿದ್ದರೆ ನಮ್ಮ ಭಾವಗಳಿಗೆ ಶರಗಳಾಗಿ ನಮ್ಮನ್ನು ಪ್ರಪಾತದತ್ತ ಒಯ್ಯುತ್ತದೆ.

(ಸೌಜನ್ಯ: ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ)

## ಶ್ರೀ ಸಿದ್ಧಗಂಗಾ ಪೂಜ್ಯ ಶ್ರೀ ಶ್ರೀ ಗಳವರ ವಜ್ರಮಹೋತ್ಸವ

ನಾಡಿನ ಭಕ್ತಕೋಟಿಯ ಪ್ರಾರ್ಥನೆಯನ್ನು ಮನ್ನಿಸಿ ಪರಮ ಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರು ಅನುಗ್ರಹಿಸಿ ಆಶೀರ್ವದಿಸಿದ ನಂತರ ಅಸ್ತಿತ್ವಕ್ಕೆ ಬಂದ ವಜ್ರಮಹೋತ್ಸವ ಸಮಿತಿ ಕಾರ್ಯಾರಂಭ ಮಾಡಿದೆ. ರಚನಾತ್ಮಕ ಯೋಜನೆಯಾಗಿ ರೂಪುತಾಳಿದೆ.

ಈ ಯೋಜನೆಯ ಅಡಿಯಲ್ಲಿ 3000 ಮಂದಿ ಏಕಕಾಲದಲ್ಲಿ ಕುಳಿತು ಊಟಮಾಡುವ ಬೃಹತ್ ಸುಸಜ್ಜಿತ ಆಧುನಿಕ ಪ್ರಸಾದನಿಲಯ ಮುಕ್ತಾಯದ ಹಂತದಲ್ಲಿದೆ. 2500 ವಿದ್ಯಾರ್ಥಿಗಳು ತಂಗುವ ಸುವಿಶಾಲ ವಿದ್ಯಾರ್ಥಿನಿಲಯ ನಿರ್ಮಾಣವಾಗುತ್ತಿದೆ.

ವಜ್ರಮಹೋತ್ಸವ ಅರ್ಥಪೂರ್ಣವಾಗಿ ಆಚರಣೆಯಾಗಬೇಕೆಂಬುದೇ ಭಕ್ತಾದಿಗಳ ಉದ್ದೇಶ.

ದಾನಿಗಳು ಉದಾರವಾಗಿ ಕಾಣಿಕೆ ಸಲ್ಲಿಸಲು ಮುಂದೆ ಬರುತ್ತಿದ್ದಾರೆ. ಇದೊಂದು ಚಿರಂತನ ಸೇವಾಕಾರ್ಯ. ಪರಮಪೂಜ್ಯರ ದೀರ್ಘಕಾಲದ ನಿಷ್ಕಾಮ ಸೇವೆಗೆ ಕೃತಜ್ಞತೆಗಳನ್ನು ಅರ್ಪಿಸುವ ಸುವರ್ಣಾವಕಾಶ.

**ದಯಮಾಡಿ ಕಾಣಿಕೆ ಸಲ್ಲಿಸಿ ಕೃತಾರ್ಥರಾಗಿ.**

---

### ಶ್ರೀ ಸಿದ್ಧಗಂಗಾಮಠದ ದಾಸೋಹಕ್ಕೆ ನಿಮ್ಮ ಕಾಣಿಕೆ ನೀಡಿ.

ಶ್ರೀ ಸಿದ್ಧಗಂಗಾ ಮಠ ಸಾರ್ವಜನಿಕ ಸೇವಾಕೇಂದ್ರ. ಶಿವಯೋಗಿಗಳ ಪವಿತ್ರ ತಪಶ್ಚರ್ಯೆಯಿಂದ ನಿರಂತರ ಸಾವಿರಾರು ಬಡಮಕ್ಕಳಿಗೆ ಅನ್ನದಾನ, ವಿದ್ಯಾದಾನ ನೀಡುತ್ತ ಬಂದಿದೆ. ನೀವೂ, ನಿಮ್ಮ ಮಕ್ಕಳೂ ಶ್ರೀಮಠದ ಆಶ್ರಯದಿಂದ ಬೆಳೆದು ಜೀವನೋಪಾಯಕ್ಕೆ ಮಾರ್ಗ ಕಲ್ಪಿಸಿಕೊಂಡವರಾಗಿರಬಹುದು! ಶ್ರೀಮಠದ ಸೇವಾಫಲಾನುಭವ ನಿಮ್ಮಾಣ ದೊರೆತ್ತಿದ್ದೀತು! ನೆರಳು ನೀಡಿ ಬೆಳಕುಕೊಟ್ಟ ಸಂಸ್ಥೆಗೆ ಪ್ರತಿಯಾಗಿ ನೀವೇನು ಮಾಡಿದ್ದೀರಿ! ವಿನಮ್ರವಾಗಿ **'ಸಿದ್ಧಗಂಗಾ'** ನಿಮ್ಮನ್ನು ಕೇಳುತ್ತದೆ. ಒಂದು ದೀಪದಿಂದ ಹತ್ತಾರು ದೀಪಬೆಳಗುವಂತೆ ಶ್ರೀಮಠದ ಸಹಸ್ರಾರು ಜೀವಂತ ದೀಪಗಳನ್ನು ಬೆಳಗಿಸಿದೆ. ಶ್ರೀ ಮಠದ ದಾಸೋಹ ಮಹಾ ಬೃಹತ್ತಾಗಿ ಬೆಳೆಯುತ್ತಿದೆ. ನೀವೂ ಇದರಲ್ಲಿ ಪಾಲ್ಗೊಳ್ಳಿ- ಕೈಲಾದಷ್ಟು ನೀಡಿ. ನಿಮ್ಮ ಕಾಣಿಕೆ ಸದ್ವಿನಿಯೋಗವಾಗುತ್ತದೆ. ಸಾರ್ಥಕವೆನಿಸುತ್ತದೆ. ಇಂದೇ ನಿಮ್ಮ ಕಾಣಿಕೆಯನ್ನು ಕಳುಹಿಸಿಕೊಡಿ.

# ಶ್ರದ್ಧಾಂಜಲಿ

**ಕಂಬನಿ :**

ಶ್ರೀ ಮಠದ ಹಳೆಯ ವಿದ್ಯಾರ್ಥಿಯಾಗಿದ್ದು " ಸಿದ್ದಗಂಗಾ " ಪತ್ರಿಕೆಯ ಸಂಪಾದಕರಾಗಿ ಸೇವೆ ಸಲ್ಲಿಸಿದ್ದ ಶ್ರೀ ಟಿ. ವಿ.ಮುತ್ತಾಚಾರ್ಯ ಅವರು ದಿನಾಂಕ 12-7-94 ರಂದು ನಿಧನರಾದುದನ್ನು ತಿಳಿದು " ಸಿದ್ಧಗಂಗಾ " ಅತೀವ ದುಃಖಕ್ಕೊಳಗಾಗಿದೆ.

ಶ್ರೀ ಟಿ. ವಿ. ಮುತ್ತಾಚಾರ್ಯ ಅವರು ತುಮಕೂರಿನ ಶ್ರೀ ಸಿದ್ಧಗಂಗಾ ಪ್ರೌಢಶಾಲೆಯಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸಿದ್ದರು, ಸಂಗೀತ ವಿದ್ವಾಂಸರಾಗಿದ್ದರು. ಶ್ರೇಷ್ಠ ವಾಗ್ಗೇಯಕರಾಗಿದ್ದರು. ಅಖಿಲ ಕರ್ನಾಟಕ ಗಾನಕಲಾ ಪರಿಷತ್ತಿನಿಂದ 'ಗಾನ ಕಲಾಯೋಗಿ" ಎಂದು ಗೌರವಿತರಾಗಿದ್ದರು. "ವಿಶ್ವಕರ್ಮಕಲಾ, ವಿಶ್ವಕರ್ಮವಿಭು"ಪತ್ರಿಕೆಗಳ ಸಂಪಾದಕರಾಗಿದ್ದರಲ್ಲದೆ ಸಂಗೀತ ಕೃತಿಗಳನ್ನು ರಚಿಸಿದ್ದರು. ಸಿದ್ಧಗಂಗಾ ಪತ್ರಿಕೆಯ ಆರಂಭದಲ್ಲಿ ಪತ್ರಿಕಾ ಸ್ಥಾಪನಿಕ ಸಂಪಾದಕರಾಗಿಯೂ ಸೇವೆ ಸಲ್ಲಿಸಿದ್ದರು.

ಸಹೃದಯರಾದ. ಸೌಜನ್ಯಶೀಲತೆಗೆ ಹೆಸರಾದ ಮುತ್ತಾಚಾರ್ಯರ ಆತ್ಮಕ್ಕೆ ದಯಾಮಯನಾದ ಭಗವಂತನು ಶಾಂತಿಯನ್ನು ನೀಡಲೆಂದು ಪ್ರಾರ್ಥಿಸುತ್ತ ಅವರ ಕುಟುಂಬ ವರ್ಗದವರಿಗೆ ದುಃಖವನ್ನು ಭರಿಸುವ ಧೈರ್ಯವನ್ನು ಕೊಡಲೆಂದು " **ಸಿದ್ಧಗಂಗಾ** " ಸಂತಾಪವನ್ನು ವ್ಯಕ್ತ ಪಡಿಸುತ್ತದೆ.

# ವೀರಶೈವ ಸಹಕಾರ ಬ್ಯಾಂಕ್ ನಿಯಮಿತ

ಅಕ್ಕಿಪೇಟೆ, ಬೆಂಗಳೂರು-560053. ದೂರವಾಣಿ: 2871003

ರಿಸರ್ವ್ ಬ್ಯಾಂಕ್ ನಿಯಮಾವಳಿಗೆ ಒಳಪಟ್ಟಿದೆ.
ಸೇಫ್ ಡಿಪಾಸಿಟ್ ಲಾಕರುಗಳ ವ್ಯವಸ್ಥೆಯಿದೆ
ಠೇವಣಿಗಳಿಗೆ ವಿಮಾ ಸೌಲಭ್ಯ ಒದಗಿಸಲಾಗಿದೆ.

ಠೇವಣಿಗಳ ಮೇಲೆ ವಾಣಿಜ್ಯ ಬ್ಯಾಂಕುಗಳಿಗಿಂತ ಶೇಕಡ ½ ರಷ್ಟು ಅಧಿಕ ಬಡ್ಡಿ ದೊರೆಯುತ್ತದೆ. ನೀವು ತೊಡಗಿಸುವ ಹಣಕ್ಕೆ ಸುರಕ್ಷೆ ಒದಗಿಸುವ ಸಂಸ್ಥೆ. ನೀವು ತೊಡಗಿಸುವ ಹಣವನ್ನು ಇಮ್ಮಡಿಯಾಗಿ ಅಥವಾ ಮುಮ್ಮಡಿಯಾಗಿ ಹೆಚ್ಚಿಸುವ ಅವಕಾಶವಿರುವ ಸಂಸ್ಥೆ. ನಿಮ್ಮ ಮಕ್ಕಳ, ನಿಮ್ಮ ಆಶ್ರಿತರ ಹಾಗೂ ನಿಮ್ಮ ಭವಿಷ್ಯದ ಹಿತರಕ್ಷಣೆ ಮಾಡುವ ಸಂಸ್ಥೆ.

(30-11-1993 ಕ್ಕೆ) ಲಕ್ಷ ರೂಗಳಲ್ಲಿ

| | | | |
|---|---|---|---|
| ಷೇರು ಬಂಡವಾಳ | : 43.11 | ಹೂಡಿಕೆಗಳು | : 203.89 |
| ಸಾಲಗಳು ಮತ್ತು | | ದುಡಿಯುವ ಬಂಡವಾಳ | : 826.16 |
| ಮುಂಗಡಗಳು | : 466.98 | ಠೇವಣಿಗಳು | : 579.16 |

**ನಮ್ಮಲ್ಲಿ ನಿಮ್ಮ ಹಣ ತೊಡಗಿಸಿ, ನಿಮ್ಮ ನೆಂಮದಿಗೆ ಸಮ್ಮೊಡನೆ . ಸಹಕರಿಸಿ**

**ಶ್ರೀ ಬಿ. ಬಸವರಾಜು**, ಬಿಎಸ್ಸಿ. ಬಿ ಎಲ್. — ಅಧ್ಯಕ್ಷರು
**ಶ್ರೀ ವೈ ಟಿ. ಮಹಾದೇವಪ್ಪ** — ಉಪಾಧ್ಯಕ್ಷರು

**ಶ್ರೀ ಬಿ. ಎಂ ಶ್ರೀಕಂಠಸ್ವಾಮಿ** ಎಲ್.ಇ.ಇ
ಕಾರ್ಯನಿರ್ವಾಹಕ ನಿರ್ದೇಶಕರು

ಶ್ರೀ ಹೆಚ್.ಡಿ. ರೇಣುಕುಮಾರ್
ಖಜಾಂಚಿ

ಶ್ರೀ ಡಾ|| ಜಿ.ಆರ್ ವಿಶ್ವನಾಥ್
ಸಮಿತಿಯ ಲೆಕ್ಕಪರಿಶೋಧಕರು

ನಿರ್ದೇಶಕರುಗಳು ;

ಶ್ರೀ ಬಿ. ಎಸ್.ಪರಮಶಿವಯ್ಯ, ಎಂ.ಎ.
ಶ್ರೀಮತಿ ಎಸ್. ಗಿರಿಜಾ, BSc.,
ಶ್ರೀ ಬಿ.ಟಿ. ಉಮೇಶ್. B.A. L L.B.,
ಶ್ರೀ ಎಂ. ಶಿವಪ್ಪ, BSc., B.L.
ಶ್ರೀ ಎಸ್. ಆರ್. ಸಿದ್ದರಾಜು. M.A.
ಶ್ರೀ ಎಲ್. ರಾಜಪ್ಪ
ಶ್ರೀ ಡಿ. ಚಂದ್ರಶೇಖರಯ್ಯ
ಶ್ರೀ ಆರ್. ನೀಲಕಂಠಯ್ಯ.
ಶ್ರೀ ಜಿ. ಶಿವಕುಮಾರ್, ಡಿ.ಎಂ.ಇ
ಶ್ರೀ ಜಿ.ಎನ್. ರಾಜಶೇಖರ್.

ಸ್ಥಾಪನೆ : 1943

ಕೆ.ಎಸ್.ಟಿ. 73606285 } ದಿ 24-8-62
ಸಿ.ಎಸ್.ಟಿ. 73656288

ತಂತಿ : 'ವೀರಶೈವ'

ಕೇಂದ್ರ ಕಛೇರಿ : { 72866 70204

ಮಿನಿ ಬಜಾರ್: 351114

# ವೀರಶೈವ ಸಹಕಾರ ಸಂಘ ನಿಯಮಿತ

(ಬೆಂಗಳೂರು ನಗರ ಜಿಲ್ಲಾ ಕೇಂದ್ರ ಸಹಕಾರ ಸಗಟು ಮಾರಾಟ ಮಳಿಗೆ)

ಅಪರ್ಣ ಕಾಂಪ್ಲೆಕ್ಸ್, 1 ನೇ ಮಹಡಿ, ಎಸ್. ಸಿ. ರಸ್ತೆ, ಬೆಂಗಳೂರು-560009

ವ್ಯವಹಾರ : ಸ್ವಚ್ಛ, ಗುಣಮಟ್ಟದ ದಿನನಿತ್ಯದ ಬಳಕೆ ಪದಾರ್ಥಗಳನ್ನು ಕಡಿಮೆ ದರದಲ್ಲಿ ಸಗಟು ಮಾರಾಟ ಶಾಖೆ ಮತ್ತು ಚಿಲ್ಲರೆ ಮಾರಾಟ ಶಾಖೆ ಮೂಲಕ ವಿತರಣೆ. ಗ್ರಾಹಕರ ಮನೆಗಳಿಗೆ ಸರಬರಾಜು ವ್ಯವಸ್ಥೆ ಮಾಡಲಾಗುವುದು.

1993-94 ನೇ ಸಾಲಿನಲ್ಲಿ ಷೇರು ಬಂಡವಾಳ : ಸದಸ್ಯರಿಂದ ರೂ. 7.08 ಲಕ್ಷ
ಸರ್ಕಾರದಿಂದ ರೂ. 13-42 ಲಕ್ಷ
ಒಟ್ಟು ರೂ. 20.50 ಲಕ್ಷ

1) ಸದಸ್ಯರ ಸಂಖ್ಯೆ : 5803
2) ಸಗಟು ಮತ್ತು ಚಿಲ್ಲರೆ ಮಾರಾಟ : ರೂ. 1800.00 ಲಕ್ಷ
3) ಆಪದ್ಧನ : ರೂ. 12.98 ಲಕ್ಷ
4) ಇತರೆ ನಿಧಿಗಳು : ರೂ. 35.00 ಲಕ್ಷ
5) 1993-94 ರಲ್ಲಿ ನಿವ್ವಳ ಲಾಭ : ರೂ. 05.75 ಲಕ್ಷ
6) ಸದಸ್ಯರಿಗೆ ಸೌಲಭ್ಯಗಳು :
   ಅ) ಕೊಳ್ಳುವ ಪದಾರ್ಥದ ಮೇಲೆ ಶೇ. 3 ರಿಯಾಯಿತಿ
   ಆ) ಷೇರಿನ ಮೇಲೆ ಶೇ. 9 ಷೇರು ಲಾಭಾಂಶ

ಮಾನ್ಯ ಸದಸ್ಯರು ಮತ್ತು ಗ್ರಾಹಕರ ಅನುಕೂಲಕ್ಕಾಗಿ ಬೆಂಗಳೂರು ನಗರದಲ್ಲಿ 4 ಸಗಟು ಮಾರಾಟ ಮಳಿಗೆಗಳು, 38 ಚಿಲ್ಲರೆ ಮಳಿಗೆಗಳು ಮತ್ತು ವಿಜಯನಗರದ ಬಡಾವಣೆಯಲ್ಲಿ ಒಂದು ಡಿಪಾರ್ಟ್‌ಮೆಂಟಲ್ ಸ್ಟೋರ್ಸ್.

ಕಾರ್ಯಕಾರಿ ಮಂಡಳಿಯ ಸದಸ್ಯರುಗಳು :
1) ಶ್ರೀ ಬಿ. ಎಂ. ಶ್ರೀಕಂಠಸ್ವಾಮಿಯವರು
ಅಧ್ಯಕ್ಷರು
2) ಶ್ರೀ ಜಿ. ತೋಟದಪ್ಪನವರು
ಉಪಾಧ್ಯಕ್ಷರು
-: ನಿರ್ದೇಶಕರು :-
3) ಶ್ರೀ ಬಿ. ಎಸ್. ಪರಮಶಿವಯ್ಯನವರು
4) ಶೀ ವೈ. ಟಿ. ಮಹದೇವಪ್ಪನವರು
5) ಶೀ ಬಿ. ಟಿ. ಉಮೇಶ್‌ರವರು
6) ಶ್ರೀ ಬಿ. ಬಸವರಾಜುರವರು
7) ಶ್ರೀ ಎಂ. ಶಿವಪ್ಪನವರು
8) ಶ್ರೀ ಡಿ. ಚಂದ್ರಶೇಖರಯ್ಯನವರು
9) ಶ್ರೀ ಆರ್. ನೀಲಕಂಠಯ್ಯನವರು
10) ಶ್ರೀ ಜಿ. ಶಿವಕುಮಾರ್‌ರವರು
11) ಶ್ರೀಮತಿ ಎಸ್. ಗಿರಿಜರವರು
12) ಶ್ರೀಮತಿ ಪ್ರೇಮಸೋಮಸುಂದರ್‌ರವರು
13) ಶ್ರೀಮತಿ ಟಿ. ಕೆಂಪಮ್ಮನವರು M.L.C
ಸ. ನಾ. ಪ್ರತಿನಿಧಿಗಳು
14) ಶ್ರೀ ಡಿ. ಎಂ. ರುದ್ರಪ್ಪನವರು
15) ಶ್ರೀ ಜಿ. ಪುಟ್ಟಗಂಗಯ್ಯನವರು
16) ವ್ಯವಸ್ಥಾಪಕನಿರ್ದೇಶಕರು
ಬಿ.ಡಿ. ಸಿ. ಸಿ. ಬ್ಯಾಂಕ್
17) ಉಪನಿಬಂಧಕರು, ಸಹಕಾರ ಸಂಘಗಳ
ಉಪನಿಬಧಂಕರ ಕಛೇರಿ,
ಬೆಂಗಳೂರು ನಗರ ಜಿಲ್ಲೆ
18) ಶ್ರೀ ಕೆ. ಎನ್. ನರಸಿಂಹಸ್ವಾಮಿಯವರು
ಪ್ರಧಾನ ವ್ಯವಸ್ಥಾಪಕರು

"ಮಾಟಕೂಟ" ಎಂಬ ಮಾತ ಕೇಳಲಾಗದು, ಶಿವಾ ಶಿವಾ! ನಿಮ್ಮ ಭಕ್ತರಿಗೆ "ಮಾಡಿದೆ" ನೆನ್ನದಿರೆಂದು ಶ್ರೀ ಗುರುಲಿಂಗವು ಕೃಪೆಯ ಮಾಡಿದ ಕಾರಣ, ಅಲ್ಲಿ ಮಾಡುವವರೂ ಮಾಡಿಸಿ ಕೊಂಬವರೂ
ನೀವೇ ಕೂಡಲಸಂಗಮದೇವಾ.

ಹಮ್ಮಿನ ಭಕ್ತಿ ಕರ್ಮಕ್ಕೆ ಮೊದಲು, ಮರ್ಮವನರಿಯದ ಮಾಟ ಸುಯಿದಾನದ ಕೇಡು! ಬಂದ ಸಮಯೋಚಿತವನರಿಯದಿದ್ದರೆ
ನಿಂದಿರಲೊಲ್ಲ ಕೂಡಲಸಂಗಮ ದೇವಾ.

—ಶ್ರೀ ಬಸವೇಶ್ವರ

"SIDDAGANGA" MONTHLY Reg. No. KRNQ 9.



ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ-572104.